Photo by V. H. Rao



ಬಹುಮಾನ
ಪಡೆದ ಶೀರ್ಷಿಕೆ

ಆಲಿಸಲು

ಕಳಿಸಿದವರು:
ಜಿ. ಪದ್ಮಾ, ಮದ್ರಾಸು



ವಿನೋದಾ ರವರ

# ದೇವದಾಸು

(ತಮಿಳು & ತೆಲುಗು)

ನಿರ್ದೇಶನ.....ವೇದಾಂತಂ ರಾಘವಯ್ಯ

ಸಾವಿತ್ರಿ...ಲಲಿತ...ನಾಗೇಶ್ವರರಾವ್...ರಂಗಾರಾವ್...ಶಿವರಾಂ..ನಂಬಿಯಾರ್

*a* **TALLAM** *Release*

## ಈ ಸಂಚಿಕೆಯಲ್ಲಿ



ಶೀಘ್ರದಲ್ಲಿಯೇ ಪ್ರದರ್ಶನವಾಗಲಿದೆ ಮಹಾತ್ಮಾರವರ

# ಸೌಭಾಗ್ಯಲಕ್ಷ್ಮಿ







EP

# SOWBHAGYALAKSHMI

(CANARESE)

*Producer & Director:* **B.V.ACHARYA**

*Songs & Dialogues:* **HUNSUR**

*Await* **RELEASE**

**A TALLAM RELEASE.**

# ಚಂದಮಾಮ

ಕಳೆದ ಆರು ತಿಂಗಳಿಂದ ನೀವು ಓದುತ್ತಿದ್ದ ಧಾರಾವಾಹಿ ಕಥೆ "ರತ್ನಕಿರೀಟ" ಈ ಸಂಚಿಕೆಯೊಂದಿಗೆ ಮುಕ್ತಾಯ ವಾಯಿತು. ಈ ಕಥೆ ನಿಮಗೆ ಎಷ್ಟರಮಟ್ಟಿಗೆ ಹಿಡಿಸಿತೋ ತಿಳಿದುಕೊಳ್ಳಲು ನಾವು ಕುತೂಹಲದಿಂದಿದ್ದೇವೆ. ಹಿಂದಿನ ಸಂಚಿಕೆಯಲ್ಲಿ ಪ್ರಾರಂಭಿಸಿದ "ಜಾತಕ ಕತೆಗಳು" ವಿಷಯ ದಲ್ಲಿ ನಿಮ್ಮ ಅಭಿಪ್ರಾಯ ತಿಳಿದುಕೊಳ್ಳಬೇಕೆಂದು ನಮ್ಮ ಅಭಿಲಾಷೆ. ನಿಮ್ಮನಿಮ್ಮ ಅಭಿಪ್ರಾಯಗಳನ್ನು ವಿವರವಾಗಿ ಬರೆದು ನಮ್ಮ ಕಛೇರಿಗೆ ಕಳುಹಿಸಿಕೊಡಿ. ಮತ್ತೊಂದು ವಿಷಯ: ಮುಂದಿನ ಮಾಸದಿಂದ "ಶಬ್ದವೇಧಿ" ಎಂಬ ರೋಮಾಂಚಕಾರಿಯಾದ ಧಾರಾವಾಹಿ ಕಥೆಯನ್ನು ಪ್ರಕ ಟಿಸುವೆವು. ಇದು ಪದೇ ಪದೇ ಚಕಿತಗೊಳಿಸುವ ಹಲವು ಸಂಭವಗಳಿಂದ ನಿಮ್ಮನ್ನು ಕೌತುಕದ ಕಡಲಲ್ಲಿ ಮುಳುಗಿಸ ಬಲ್ಲದೆಂದು ಇಷ್ಟೇ ನಿಮಗೀಗ ಹೇಳುವೆವು. ಇದು ನಿಜವೋ ಸುಳ್ಳೋ ಎಂದು ನೀವೇ ಓದಿ ನಿರ್ಧರಿಸಿರಿ. ಅದಷ್ಟೇ ಅಲ್ಲ, ಇನ್ನೂ ಕೆಲವು ಹೊಸ ಶೀರ್ಷಿಕೆಗಳನ್ನೂ ಪ್ರಾರಂಭಿಸ ಬೇಕೆಂದು ನಮ್ಮ ಮನಸ್ಸಿನಲ್ಲಿದೆ. ಈ ವಿಜಯ ಸಂತ್ಸರವು ನಮಗೆಲ್ಲರಿಗೂ ಎಲ್ಲಾ ಗೆಲುವುಗಳನ್ನೂ ಕೊಡಲೆಂದು ಆಶಿಸೋಣ.

ಸಂಪುಟ ೧೦ : ಮೇ ೧೯೫೩ : ಸಂಚಿಕೆ

SANKAR




# ಉಚಿತ ಶಾಸ್ತಿ

ಇದ್ದಳೊಬ್ಬ ಹುಡುಗಿ
ಆ ಹುಡುಗಿ ಬಲು ಒಳ್ಳೆಯವಳು
ಆದರೊಂದು ದುರ್ಗುಣವಿತ್ತು
ಮಾಡಬಾರದ ಕೆಲಸ ಮಾಡುತಿತ್ತು.

ಮೇಜಿನ ಕಪಾಟು ತೆಗೆಯುವಳು
ಕಾಗದಗಳನ್ನು ಮುಗುಚಿ ಹಾಕುವಳು
ಎಲ್ಲವನ್ನೂ ನೋಡುವಳು
ಚಲ್ಲಾಪಿಲ್ಲಿ ಬಿಸಾಡುವಳು.



ಇದರಿಂದಾಗಿ ಆ ಹುಡುಗಿ
ಛೀಮಾರಿ ಪಡೆದಳು
ಅವರಿವರಿಂದ
ಒಳ್ಳೆಯ ಹೆಸರನು ಕೆಡಿಸಿಕೊಂಡಳು.

ಒಮ್ಮೆ ಮನೆಯಲ್ಲಿ ಯಾರಿಲ್ಲದಿರಲು
ಎಲ್ಲರೂ ಎಲ್ಲಿಗೋ ಹೋಗಿರಲು
ಹುಡುಗಿ ಮಾತ್ರವಿದ್ದಳು
ಕೀಟಲೆಗೆ ಸುಸಮಯ ವೆಂದುಕೊಂಡಳು.

ತುಂಬಾ ಸಂತಸಗೊಂಡಳು
ಅಜ್ಜನ ಕೋಣೆಗೆ ಸೇರಿದಳು
ಮೇಜಿನ ಮೇಲೆ ಕಾಣಿಸಿತು
ಕನ್ನಡಕ, ನಶ್ಯದಡಬ್ಬಿ.



‘ಭಲೆ, ಭಲೆ’ ಎಂದಳು
ಕನ್ನಡಕವ ಹಾಕಿಕೊಂಡು
ಕುಲುಕಿದಳು, ಆ ಮೇಲೆ ಅವಳು
ನಶ್ಯದ ಡಬ್ಬಿಯ ಕಡೆ ನೋಡಿದಳು.

ಕನ್ನಡಕ ಮೇಜಿನ ಮೇಲಿಟ್ಟಳು
ನಶ್ಯದ ಡಬ್ಬಿ ಕೈಯಲಿ ಹಿಡಿದಳು
ತೆಗೆಯಲು ಪ್ರಯತ್ನಿಸಿದಳು ಮುಚ್ಚಳ
ಆದರೆ ಆಯಿತು ವಿಫಲ.

ಆಗ ಅಂದುಕೊಂಡಳು ಆ ಹುಡುಗಿ
ಮುಚ್ಚಳವೇಕೆ ಬರಲಿಲ್ಲ
ಉಗಿರಿಂದ ಎಬ್ಬಿಸುವೆನು
ಯಾಕೆ ಬಾರದೋ ನೋಡುವೆನು.





“ಕಮಲಾಕರ”

ಉಗಿರಿಂದ ಮೇಲಕೆ ಎಳೆಯಲು
ತೆಗೆಯಿತು ಮುಚ್ಚಳವು
ಹಾರಿತು ನಶ್ಯ ಮುಖದ ಮೇಲೆ
ಕೂಡಲೇ ಕವಿಯಿತು ಕತ್ತಲೆ.

ಕೆಳಗೆ ಬಿತ್ತು ನಶ್ಯದ ಡಬ್ಬಿ
ಕಿವ್ವನೆ ಕಿರಿಚಿದಳು ಹುಡುಗಿ,
ಓಡೋಡಿ ಬಂದರು ಅಜ್ಜಯ್ಯ
ಕೊಟ್ಟರು ಕೆನ್ನೆಗೆ ಕಜ್ಜಾಯ.

# ಮುಖ ಚಿತ್ರ

ವಿದ್ಯಾಭ್ಯಾಸವೆಲ್ಲಾ ಮುಗಿದಮೇಲೆ ಗುರುವಿನ ಇಷ್ಟದಂತೆ ಗುರುದಕ್ಷಿಣೆ ಕೊಡಲು ಕುರು ಕುಮಾರರು ಸಿದ್ಧರಾದರು. ಆಗ ದ್ರೋಣಾಚಾರ್ಯರು ಅವರನ್ನು ಕುರಿತು—"ವೀರ ಕುಮಾರರೆ, ನನಗೆ ವೀರ ಕಾಣಿಕೆಯೇ ಬೇಕು. ಪಾಂಚಾಲ ದೇಶದ ರಾಜನಾದ ದ್ರುಪದ ನನ್ನು ಯುದ್ಧದಲ್ಲಿ ಗೆದ್ದು ಹಿಡಿದು ಕಟ್ಟಿ ತಂದು ನನಗೆ ಒಪ್ಪಿಸಬೇಕು. ಇದುವೇ ನೀವು ನನಗೆ ಕೊಡತಕ್ಕ ಗುರುದಕ್ಷಿಣೆ" ಎಂದರು.

ಒಡನೆಯೇ ದುರ್ಯೋಧನ ಮೊದಲಾದ ಕೌರವರು "ನಾವು ತರುವೆವು" ಎಂದು ಸಡ್ಡು ಹೊಡೆದುಕೊಂಡು, ಭರದಿಂದ ಪಾಂಚಾಲ ದೇಶಕ್ಕೆ ಸಾಗಿದರು. ಆದರೆ ದ್ರುಪದನು ಸಾಮಾನ್ಯನಲ್ಲ; ವೀರಾಧಿವೀರ. ಬೇಗದಲ್ಲಿಯೇ ಕೌರವರೆಲ್ಲಾ ಸೋತು ಹಿಂದಿರುಗಿ ಓಡಿ ಬರಬೇಕಾಯಿತು.

ಅದನ್ನು ನೋಡಿ ಪಾಂಡವರು ಯುದ್ಧಕ್ಕೆ ಹೊರಟರು. ದ್ರುಪದನಿಗೂ ಪಾಂಡವ ರೈವರಿಗೂ ಪ್ರಚಂಡ ಕಾಳಗವು ನಡೆಯಿತು. ಪರಾಕ್ರಮಕೇಸರಿಯಾದ ಅರ್ಜುನನು ಸಾಹಸದಿಂದ ಮುಂದೆ ನುಗ್ಗಿ, ದ್ರುಪದನ ರಥದ ಮೇಲೆ ಹಾರಿದನು. ಹಾಗು ಅವನನ್ನು ಕಟ್ಟಿ ತನ್ನ ರಥದಲ್ಲಿ ಕೆಡವಿಕೊಂಡನು. ಯುದ್ಧವು ಅಲ್ಲಿಗೆ ಕೊನೆಗೊಂಡಿತು.

ಹೀಗೆ ವಿಜಯಶಾಲಿಯಾದ ಅರ್ಜುನನು ದ್ರುಪದನನ್ನು ತಂದು ಗುರು ದ್ರೋಣಾ ಚಾರ್ಯರಿಗೆ ಗುರುದಕ್ಷಿಣೆಯಾಗಿ ಸಮರ್ಪಿಸಿದನು.

ಆಗ ದ್ರೋಣರು ದ್ರುಪದನನ್ನು ಕುರಿತು—"ದ್ರುಪದಾ, ಬಾಲ್ಯದಲ್ಲಿ ನಾವಿಬ್ಬರೂ ಸ್ನೇಹಿತರಾಗಿದ್ದೆವೆಂಬುದನ್ನು ಈಗಲಾದರೂ ಒಪ್ಪಿಕೊ. ನೀನು ರಾಜ್ಯಾಧಿಕಾರಿಯಾದ ಮೇಲೆ, ನಾನೊಮ್ಮೆ ನಿನ್ನನ್ನು ನೋಡಲಿಕ್ಕೆ ಬಂದಾಗ, ಗರ್ವದಿಂದ ನೀನು ಹಳೆಯ ಸ್ನೇಹವನ್ನು ಮರೆತು ನನ್ನನ್ನು ಧಿಕ್ಕರಿಸಿದಿ. ನನ್ನ ಶಿಷ್ಯರಿಂದ ನಿನಗೆ ತಕ್ಕ ಪ್ರತೀಕಾರ ಮಾಡುವೆ ನೆಂದು ನಾನು ಆಗ ಪ್ರತಿಜ್ಞೆ ಮಾಡಿದೆ. ಅದು ಈಗ ನೆರವೇರಿತು. ಇನ್ನು ನಾನು ನಿನ್ನ ಸ್ನೇಹವನ್ನೆ ಬಯಸುವೆನು" ಎಂದು ಬುದ್ಧಿ ಹೇಳಿ, ಬಂಧಮುಕ್ತನಮಾಡಿ ಬಿಟ್ಟುಬಿಟ್ಟನು.

ದ್ರುಪದನ ಸಿಟ್ಟು ಅಣಗಲಿಲ್ಲ. ತನಗೆ ದ್ರೋಣನನ್ನು ಗೆಲ್ಲುವಂತಹ ಮಗನೂ, ಅರ್ಜುನನನ್ನು ವರಿಸತಕ್ಕಂತಹ ಮಗಳೂ ಬೇಕೆಂದು ಬಯಸಿದನು. ಗಂಗಾ ತೀರದಲ್ಲಿ ತಪಸ್ವಿಗಳನ್ನು ಸೇವಿಸುತ್ತಾ, ಯಾಗವನ್ನು ಮಾಡಲಾರಂಭಿಸಿದನು.



# ಸ್ವರ್ಣ ಪಾತ್ರೆ

ಬಹಳಕಾಲದ ಹಿಂದೆ ಸೇರಿ ರಾಜ್ಯದಲ್ಲಿ ಬೋಧಿಸತ್ವನು ಕಂಚುಗಾರನಾಗಿ ಹುಟ್ಟಿದನು. ಆತ ಹಳೇಪಾತ್ರೆಗಳನ್ನು ಕೊಳ್ಳುವನು; ಹೊಸಪಾತ್ರೆಗಳನ್ನು ಮಾರುವನು. ಈ ವ್ಯಾಪಾರದಲ್ಲಿ ಬೋಧಿಸತ್ವನು ದುರಾಶೆಗೊಳಗಾಗದೆ ನ್ಯಾಯಸಮ್ಮತವಾಗಿ ವ್ಯಾಪಾರ ಮಾಡುತ್ತಿದ್ದನು.

ಆ ರಾಜ್ಯದಲ್ಲೇ ಅದೇ ವ್ಯಾಪಾರ ಮಾಡುತ್ತಿದ್ದ ಮತ್ತೊಬ್ಬ ವರ್ತಕ. ಆತ ಕಡುಲೋಭಿ. ಆತ ಸದಾ ಬೋಧಿಸತ್ವನೊಂದಿಗೆ ಪೋಟಾಪೋಟಿಮಾಡುತ್ತಿದ್ದ. ಬಹಳ ದುರಾಶೆಯ ಮನುಷ್ಯ. ಧನಾಶೆಗಾಗಿ ಎಂತಹ ಹೀನಕೃತ್ಯ ಮಾಡಲೂ ಹಿಂಜರಿಯುತ್ತಿರಲಿಲ್ಲ. ಅಷ್ಟೇ ಅಲ್ಲ, ಬೋಧಿಸತ್ವನು ಹೋದೆಡೆ ಆತನನ್ನು ಹಿಂಬಾಲಿಸುವನು.

ಒಂದುಸಾರಿ ಇಬ್ಬರೂ ಒಟ್ಟಾಗಿ "ತೇಲವಾಹಿ" ನದಿಯನ್ನು ದಾಟಿ ಅಂಧಾಪುರವನ್ನು ಪ್ರವೇಶಿಸಿದರು. ಪಟ್ಟಣದಲ್ಲಿ ಪ್ರವೇಶಿಸಿದ ಕೂಡಲೇ ಅನವಶ್ಯಕವಾಗಿ ವಾಜ್ಯಕ್ಕೆ ಎಡೆ ಕೊಡದಂತೆ ಅವರಿಬ್ಬರೂ ತಮ್ಮ ತಮ್ಮೊಳಗೆ ಕೆಲಕೆಲ ಬೀದಿಗಳನ್ನು ವಿಭಾಗಿಸಿಕೊಂಡರು.

ಅಂಧಾಪುರದಲ್ಲಿ ಒಂದು ಕುಟುಂಬವಿತ್ತು. ಆ ಕುಟುಂಬ ಈಗ ತುಂಬಾ ಶೋಚನೀಯಾವಸ್ಥೆಯಲ್ಲಿತ್ತು. ಹಿಂದೆ ಆ ಮನೆತನದವರು ಭಾರಿ ವ್ಯಾಪರಸ್ಥರಾಗಿದ್ದರು. ಆದರೀಗ ಅವರಿಗೆ ಅಂಗಬಲವಾಗಲೀ ಆರ್ಥಿಕಬಲವಾಗಲೀ ಇರಲಿಲ್ಲ.

ಆ ಕುಟುಂಬದಲ್ಲಿ ಈಗ ಉಳಿದಿರುವವರೆಂದರೆ ಮುದಿ ಅಜ್ಜಿಯೊಬ್ಬಾಕೆ ಮತ್ತು ಆಕೆಯ ಮೊಮ್ಮಗಳು ಅಷ್ಟೇ. ಪಾಪ, ಅವರಿಬ್ಬರೂ ಆ ಊರಿನಲ್ಲಿ ಆ ಕೆಲಸ, ಈಕೆಲಸ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು.

ಈ ಕಡು ದರಿದ್ರರು ಮನೆಯಲ್ಲಿದ್ದ ಪಾತ್ರೆಗಳನ್ನೆಲ್ಲಾ ಮಾರಿಕಾಲ ನೂಕುತ್ತಿದ್ದರು.

ಆದರೆ ಎಲ್ಲವಸ್ತುಗಳನ್ನು ಮಾರಿಬಿಟ್ಟಿದ್ದರೂ ಸಹ ಒಂದೇ ಒಂದು ವಸ್ತುಮಾತ್ರ ಮಿಕ್ಕಿತ್ತು. ಅದು ಆ ಮನೆಯ ಯಜಮಾನಿಯಾಗಿದ್ದ ವರ್ತಕನು ಊಟಮಾಡುತ್ತಿದ್ದ ತಟ್ಟೆ. ಅದು

ಎಚ್. ನಾರಾಯಣರಾವ್.



ಬಹಳಕಾಲದಿಂದ ಇತರಸಾಮಾನುಗಳಮಧ್ಯೆ ಬಿದ್ದು ಮಾಸಿಹೋಗಿತ್ತು. ಆದುದರಿಂದ ಆ ಅಜ್ಜಿಗಾಗಲೀ, ಹುಡುಗಿಗಾಗಲೀ, ಆ ತಟ್ಟೆ ಯಾವಲೋಹದಿಂದ ಮಾಡಿತ್ತೋ ತಿಳಿಯದು.

ಹೀಗಿರಲು ಮೇಲೆ ಹೇಳಿದ ಲೋಭಿ ವರ್ತಕನು "ಪಾತ್ರೆ ತಾಯಿ ಪಾತ್ರೆ, ಹಳೆಯವು ಕೊಳ್ಳುತ್ತೇನೆ, ಹೊಸವು ಮಾರುತ್ತೇನೆ" ಎಂದು ಕೂಗುತ್ತಾ ಅಜ್ಜಿ ಮನೆಮುಂದೆ ಹೋಗುತ್ತಿದ್ದ.

ಇದನ್ನು ಕೇಳಿದ ಆ ಹುಡುಗಿ ಅಜ್ಜಿಯ ಹತ್ತಿರ ಹೋಗಿ "ಅಜ್ಜೀ, ಅಜ್ಜೀ, ನನಗೊಂದು ಲೋಟಾ ಕೊಡಿಸು, ನೀರು ಕುಡಿಯಲು" ಎಂದು ಕೇಳಿದಳು.



"ಏನುಕೊಟ್ಟು ಕೊಂಡು ಕೊಡಲಿ, ಹೇಳೇ ತಾಯಿ" ಎಂದಳು ಅಜ್ಜಿ ದೀನ ಧ್ವನಿಯಲ್ಲಿ.

ಆಗ ಮೂಲೆಯಲ್ಲಿದ್ದ ತಟ್ಟೆಯ ವಿಷಯ ಜ್ಞಾಪಿಸಿದಳು ಆ ಹುಡುಗಿ. ಅದನ್ನು ಆ ವರ್ತಕನಿಗೆ ಕೊಟ್ಟು ಯಾವುದಾದರೂ ಒಂದು ಲೋಟಾ ಕೊಡುವಂತೆ ಕೇಳಿದಳು ಅಜ್ಜಿ.

ವರ್ತಕ ಆ ತಟ್ಟೆಯನ್ನು ಕೈಯಲ್ಲಿ ಹಿಡಿದು ಕೊಂಡು ನೋಡಿದ. ಅದು ಬಂಗಾರದ ತಟ್ಟೆಯಾಗಿರಬಹುದೆಂದು ಆತನಿಗೆ ಅನುಮಾನವುಂಟಾಯಿತು. ಸೂಜಿ ತೆಗೆದುಕೊಂಡು ಒಂದು ಗೆರೆ ಎಳೆದ. ಅದು ಅಪ್ಪಟ ಬಂಗಾರವೆಂದು ಖಚಿತವಾಯಿತು. ಒಂದು ಕಾಸಾದರೂ ಕೊಡದೆ ಅದನ್ನು ದೋಚಿಬಿಡಬೇಕೆಂಬ ದುರ್ಬುದ್ಧಿ ಜನಿಸಿತು ಅವನಿಗೆ.

"ಇದೆಲ್ಲಿ ಸಿಕ್ಕಿತಮ್ಮಾ ನಿನಗೆ? ಕುರುಡು ಕಾಸೂ ಸಹ ಗಿಟ್ಟೋಲ್ಲ. ಬೆಳಗ್ಗೆ ಎದ್ದು ಯಾರಮುಖ ಕಂಡೆನೋ, ಚೋ ಒಳ್ಳೇ ವ್ಯಾಪಾರ" ಎಂದು ಬೇಸರಿಕೆಯ ಧ್ವನಿಯಿಂದ ಆ ತಟ್ಟೆಯನ್ನು ಕೆಳಗೆ ಒಗೆದು ಅಲ್ಲಿಂದೆದ್ದು ಹೊರಟುಹೋದ.

ಅವನು ಹೋದ ಸ್ವಲ್ಪ ಹೊತ್ತಿಗೆಲ್ಲಾ ಮತ್ತೊಂದು ದಿಕ್ಕಿನಿಂದ ಬೋಧಿಸತ್ವನು ಆ ಬೀದಿಗೆ ಅದೇ ರೀತಿಯಾಗಿ ಕೂಗುತ್ತಾ ಬಂದ.

ಈ ಸಾರಿಯೂ ಸಹ ಆ ಹುಡುಗಿಗೆ ಈ ಕೂಗು ಕೇಳಿಸಿತು. ಮತ್ತೆ ಓಡಿದಳು ಅಜ್ಜಿಯ ಹತ್ತಿರ ತನಗೆ ಲೋಟಾ ಕೊಡಿಸೆಂದು. ಅದಕ್ಕೆ ಆಕೆ "ಯಾಕಮ್ಮಾ, ಈ ತಾಪ

ತ್ರಯು. ಈಗತಾನೇ ಒಬ್ಬಾತ ಬಂದು ಕೆಲಸಕ್ಕೆ ಬಾರದ ತಟ್ಟೆ ಎಂದು ಒಗೆದು ಹೋದ" ಎಂದು ಸಮಾಧಾನ ಮಾಡಿದಳು.

"ಹಾಗಲ್ಲ ಅಜ್ಜಿ, ಈತ ತುಂಬಾ ಒಳ್ಳೆಯವನಂತೆ ಕಾಣಿಸುವನು. ಎಲ್ಲರೊಂದಿಗೆ ತುಂಬಾ ವಿನಯವಾಗಿ ವರ್ತಿಸುತ್ತಿದ್ದಾನೆ. ಈತ ನಮ್ಮ ತಟ್ಟೆಯನ್ನು ಖಂಡಿತ ಕೊಂಡುಕೊಳ್ಳುತ್ತಾನೆ" ಎಂದಳು.

"ಸರಿ, ಹಾಗಾದರೆ ಅವನನ್ನು ಕರೆ" ಎಂದಳು ಅಜ್ಜಿ. ಆತ ಬಂದ ಕೂಡಲೇ ಆತನ ಕೈಗೆ ಕೊಟ್ಟರು ಆ ತಟ್ಟೆ. ಅದನ್ನು ಕಂಡಾಕ್ಷಣ ನಿಜವನ್ನು ಅರಿತು ಬೋಧಿಸತ್ವನು ಹೀಗೆಂದ: "ತಾಯೀ, ಈ ತಟ್ಟೆ ಬಂಗಾರದಿಂದ ಮಾಡಿದ್ದು. ಒಂದು ಸಾವಿರ ಮೊಹರಿ ಬೆಲೆ ಬಾಳುತ್ತೆ. ಇದನ್ನು ಕೊಂಡುಕೊಳ್ಳುವಷ್ಟು ಹಣ ನನ್ನ ಹತ್ತಿರವಿಲ್ಲ" ಎಂದ.

ಆಗ ಅಜ್ಜಿ ಎಂದಳು: "ಅಪ್ಪಾ, ಈಗ ನೀನು ಬರುವ ಮೊದಲು ಒಬ್ಬ ವರ್ತಕನು ಬಂದು ಇದನ್ನು ನೋಡಿ, ಕುರುಡು ಕಾಸೂ ಸಹ ಬಾಳುವುದಿಲ್ಲವೆಂದು ನೆಲದಮೇಲೆ ಒಗೆದು ಹೊರಟು ಹೋದ. ನೀನು ಚಿನ್ನದ ತಟ್ಟೆ ಎಂದು ಹೇಳುವೆ! ನಿನ್ನ ಸುಗುಣದ ಮಹಿಮೆಯಿಂದ ಅದು ಈ ರೀತಿ ಬದಲಾಯಿತೋ ಏನೋ. ನಿನಗೆ ತೋರಿದ್ದು ಕೊಟ್ಟು ತೆಗೆದು ಕೊಂಡು ಹೋಗು."

ಆಗ ಬೋಧಿಸತ್ವನ ಹತ್ತಿರ ಐನೂರು ಮೊಹರಿಗಳು ಮಾತ್ರವಿತ್ತು. ಕೆಲಪಾತ್ರೆಗಳು




ಮಿಕ್ಕಿತ್ತು. ಆ ಹಣ ಮತ್ತು ಪಾತ್ರೆಗಳನ್ನು ಅವರ ಮುಂದಿಟ್ಟು "ಅಮ್ಮಾ ಈ ಹಣ ಮತ್ತು ಪಾತ್ರೆಗಳನ್ನು ತೆಗೆದುಕೊಳ್ಳಿ. ನನ್ನ ವ್ಯಾಪಾರ ಸಾಗಿಸಲು ಈ ತಕ್ಕಡಿ, ಗೋಣಿಚೀಲ ಮತ್ತು ದಾರಿ ಖರ್ಚಿಗೆ ಎಂಟು ಮೊಹರಿ ಇಟ್ಟುಕೊಳ್ಳುವೆನು" ಎಂದ.

ಈ ರೀತಿ ಅವರ ಅನುಮತಿ ಪಡೆದು ಬೋಧಿಸತ್ವನು ನೆಟ್ಟಗೆ ನದಿಯ ಹತ್ತಿರ ಹೋಗಿ ಅಂಬಿಗನಿಗೆ ಎರಡು ಮೊಹರಿ ಕೊಟ್ಟು ಹಡಗು ಹತ್ತಿದ.

ಬೋಧಿಸತ್ವನು ಹಾಗೆ ಹೋದನೋ ಇಲ್ಲವೋ ಆ ಲೋಭಿ ವರ್ತಕ ಮತ್ತೆ ಆ ಬಡ ಮುದುಕಿಯ ಮನೆಗೆ ಬಂದು "ಎಲ್ಲಮ್ಮಾ,

ಆ ತಟ್ಟೆ ಹೀಗೆ ತಾ. ಇನ್ನೊಂದು ಸಾರಿ ನೋಡುತ್ತೇನೆ" ಎಂದು ಒಂದು ರೀತಿ ಉದಾಸೀನ ಭಾವದಿಂದ ನುಡಿದ.

ಅಜ್ಜಿಗೆ ರೇಗಿಹೋಯಿತು. "ನೀನು ಬಹಳ ಒಳ್ಳೆಯವನು ಕಾಣಪ್ಪಾ, ಸಾವಿರ ಮೊಹರಿಗಳ ಬೆಲೆಬಾಳುವ ತಟ್ಟೆಯನ್ನು ಕೆಲಸಕ್ಕೆ ಬಾರದ ಕಸದಂತೆ ಒಗೆದು ಹೋದೆ. ಅಲ್ಲ, ಆತ ನಿಮ್ಮ ಯಜಮಾನನಿರಬೇಕು, ಈಗಲೇ ಸಾವಿರ ಮೊಹರಿ ಕೊಟ್ಟು ತೆಗೆದುಕೊಂಡು ಹೋದರು" ಎಂದಳು.

ಈ ಮಾತು ಕೇಳಿ ಆ ಲೋಭಿ ಸುಸ್ತು ಬಿದ್ದ. "ಎಲಾ, ಇವನ ಮನೆ ಹಾಳಾಗ. ಹತ್ತು ಸಾವಿರ ಮೊಹರಿ ಬೆಲೆಬಾಳುವ ತಟ್ಟೆಯನ್ನು ಹೊಡೆದುಬಿಟ್ಟನಲ್ಲಾ. ನನಗೆ ಎಷ್ಟು ನಷ್ಟ ಮಾಡಿದ, ನನ್ನ ಮನೆ ಹಾಳು ಮಾಡಿದ. ಪಾಪಿ" ಎಂದು ಪರಿಪರಿವಿಧದಲ್ಲಿ ಪರಿತಪಿಸಿದ.

ದುಃಖಪಡುವುದೇನು ಬಂತು; ಅವನ ಮತಿಯೇ ಕೆಟ್ಟುಹೋಯಿತು. ತನ್ನಲ್ಲಿದ್ದ ಹಣವನ್ನೂ, ಪಾತ್ರೆಗಳನ್ನೂ ಆ ಮನೆಯ ಮುಂದೆ ಬಿಸುಟು, ಒಂದು ಬೆತ್ತವನ್ನು ಕೈಯಲ್ಲಿ ಹಿಡಿದುಕೊಂಡು ಗಬಗಬನೆ ನದಿಯ ದಡವನ್ನು ಸೇರಿದ.

ಆಗಾಗಲೇ ಬೋಧಿಸತ್ವನು ದೋಣಿಯಲ್ಲಿ ಬಹಳದೂರ ಸಾಗಿಬಿಟ್ಟಿದ್ದ. ಅಂಬಿಗನೊಂದಿಗೆ "ಏ, ಅವನನ್ನು ಕರೆದೊಯ್ಯಬೇಡ. ದೋಣಿಯನ್ನು ಹಿಂದಕ್ಕೆ ತಿರುಗಿಸು" ಎಂದು ಹುಚ್ಚುಚ್ಚಾರ ಕೂಗಿ ಕರೆಯುತ್ತಿದ್ದ ಆ ಲೋಭಿ. ಬೋಧಿಸತ್ವ ಅಂಬಿಗನಿಗೆ "ಅವನ ಮಾತಿಗೆ ಬೆಲೆಮಾಡಬೇಡ" ಎಂದು ಹೇಳಿದ. ದೋಣಿ ಆಚೆ ದಡದಕಡೆ ಸಾಗುತಿತ್ತು.

ಮತ್ತೇನೂ ಮಾಡಲಾರದೆ ಆ ಲೋಭಿ ಬೋಧಿಸತ್ವನಕಡೆ ನೋಡುತ್ತಾ ಬಾಯಿಗೆ ಬಂದ ಅವಾಚ್ಯಗಳನ್ನು ಆಡುತ್ತಾ ದುಃಖಿಸತೊಡಗಿದ. ರಕ್ತಕಾವೇರಿತು. ಮೈ ಕಂದಿ ಹೋಯಿತು. ಹೃದಯ ಡವಡವ ಬಡಿದುಕೊಳ್ಳ ಸಾಗಿತು. ಬೋಧಿಸತ್ವನಲ್ಲಿನ ಆಗ್ರಹ, ದ್ವೇಷ ನೂರ್ಮಡಿಯಾಗಿ ಸೇಡಿನ ಉದ್ವೇಗದಲ್ಲಿ ನದಿಗೆ ಹಾರಿದ. ಬೋಧಿಸತ್ವನುಮಾತ್ರ ಅನೇಕ ದಾನಧರ್ಮಗಳನ್ನು ಮಾಡುತ್ತ, ಪ್ರತಿಯೊಬ್ಬರಲ್ಲೂ ಪ್ರೀತಿಯಿಂದ ವರ್ತಿಸುತ್ತಾ ಧರ್ಮಾತ್ಮನೆಂದು ಹೆಸರು ಗಳಿಸಿದ.






6

ಅಷ್ಟರಲ್ಲಿ ಮಹೀಪಾಲನು ಎಣಿಸಿದ್ದಂತೆಯೇ ನೆರೆಯದ್ವೀಪದರಾಜ ವಸುಪಾಲನು ಮಂಜುಳ ದ್ವೀಪದ ಮೇಲೆ ದಂಡೆತ್ತಿ ಬಂದ. ಉಭಯ ಪಕ್ಷಗಳಿಗೂ ಘೋರವಾದ ಯುದ್ಧ ನಡೆಯಿತು. ಆ ಯುದ್ಧದಲ್ಲಿ ತಪೋವರ್ಧನನೂ ಮಹೀಪಾಲನೂ ಮರಣ ಹೊಂದಿದರು. ಈ ವಿಷಯ ತಿಳಿದ ಕೂಡಲೇ ಮಹೀಪಾಲನ ಮಡದಿ ಪ್ರಾಣಬಿಟ್ಟಳು.

ಆ ತರುವಾಯ ವಸುಪಾಲನು ಮಂಜುಳ ದ್ವೀಪವನ್ನು ಆಕ್ರಮಿಸಿಕೊಂಡು ರತ್ನಕಿರೀಟಕ್ಕಾಗಿ ಹುಡುಕಾಡಿದ. ಆದರದು ಕಾಣಿಸಲಿಲ್ಲ. ಕೂಡಲೇ ನಾಲ್ಕುಕಡೆಗೂ ಭಟರನ್ನು ಅಟ್ಟಿದ. ಅದರಿಂದ ಉಪಯೋಗವೇನೂ ಆಗಲಿಲ್ಲ.

ಹೀಗೇ ಇರಲು ಒಂದು ದಿನ ರಾಜನು ಬೇಟೆಯಾಡಲು ಅಡವಿಗೆ ಹೋದ. ಆ ಅರಣ್ಯದಲ್ಲಿ ಒಂದು ಮರದ ಕೊಂಬೆಗಳ ಸಂದಿಯಲ್ಲಿ ಧಗಧಗನೆಂದು ಹೊಳೆಯುತ್ತಿರುವ ರತ್ನಕಿರೀಟ ಕಾಣಿಸಿತು.

ಆದರೇನು ಪ್ರಯೋಜನ? ಅದನ್ನು ಪಡೆಯುವಂತಿಲ್ಲ! ಆ ಮರವನ್ನು ಒಂದು ಭಯಂಕರವಾದ ಭೂತಸರ್ಪವು ಸುತ್ತಿಕೊಂಡಿದೆ. ಅದರ ಕಣ್ಣುಗಳು ಮಿಣುಕು ಮಿಣುಕೆಂದು ಹೊಳೆಯುತ್ತಿವೆ. ಕಾಲುಗಳಿಗೆ ಪಂಜಾಗಳೂ, ಹುಲಿಗೆ ಇರುವಂತಹ ಉಗುರುಗಳೂ ಇವೆ. ಅದರ ಆಕಾರ ಮತ್ತು ಚರ್ಮಗಳನ್ನೂ ನೋಡಿದರೆ ಮೊಸಳೆಯಂತೆ ಕಾಣುತ್ತಿದೆ. ಅದು ಬಾಯಿ ತೆಗೆದು ಬುಸುಗುಟ್ಟಿದರೆ ಅಗ್ನಿಜ್ವಾಲೆಗಳು ಹೊರಬರುತ್ತವೆ.

ವಸುಪಾಲ ಅರಮನೆಗೆ ಹಿಂತಿರುಗಿದ. ಇಂತಹ ಜಾಗದಲ್ಲಿ ರತ್ನಕಿರೀಟವಿದೆ; ಹೇಗಾದರೂ ಮಾಡಿ ಅದನ್ನು ತೆಗೆದುಕೊಂಡು ಬರ



ಬೇಕೆಂದು ಭಟರಿಗೆ ಆಜ್ಞಾಪಿಸಿದ. ಭಟರು ಹೋಗಿ ಪ್ರಯತ್ನಮಾಡಿದರು. ಆದರೆ ಅವರ ಪ್ರಯತ್ನವೆಲ್ಲಾ ನಿಷ್ಫಲವಾಯಿತು.

ಆಗ ರಾಜ ಒಂದು ಉಪಾಯ ಹೂಡಿದ. "ಆ ಭೂತ ಸರ್ಪವನ್ನು ಕೊಂದು ರತ್ನಕಿರೀಟವನ್ನು ತರುವಂತಹವನಿಗೆ ಆತನು ಕೋರಿದ ಬಹುಮಾನ ನೀಡುವೆನು" ಎಂದು ಡಂಗುರ ಸಾರಿಸಿದ. ಇದನ್ನು ಕೇಳಿದವರಿಗೆಲ್ಲಾ ಒಂದೊಂದು ರೀತಿ ಆಶೆಯುಂಟಾಯಿತು. ಆದರೆ ಪ್ರಯತ್ನಮಾಡಿದವರೆಲ್ಲಾ ಭೂತ ಸರ್ಪದ ಅಗ್ನಿಜ್ವಾಲೆಗೆ ಆಹುತಿಯಾದರು. ಕೊನೆಗೆ ರಾಜನಿಗೆ ಕಡು ಬೇಸರವಾಯಿತು. ಪ್ರಸಿದ್ಧ ಜೋತಿಷ್ಕರನ್ನು ಕರೆಸಿ "ರತ್ನಕಿರೀಟವನ್ನು ಪಡೆಯುವ ಮಾರ್ಗಯಾವುದು?" ಎಂದು ಕೇಳಿದ.



ಅವರು ಚಕ್ರಗಳನ್ನು ಹಾಕಿ, ಅಂಕೆಗಳನ್ನು ಗುಣಿಸಿ "ಮಹಾಪ್ರಭೂ, ಎಂದಿಗಾದರೂ ಆ ರತ್ನಕಿರೀಟ ಅದರ ವಂಶಸ್ಥರಿಗೆ ಲಭಿಸುವುದೇ ಹೊರತು ಅನ್ಯರು ಪ್ರಯತ್ನಪಡುವುದರಿಂದ ಲಾಭವಿಲ್ಲ" ಎಂದು ಹೇಳಿದರು.

ಯಾರಾದರೂ ಆ ವಂಶಸ್ಥರು ಬರುವರೇನೋ ಎಂದು ಚಾತಕ ಪಕ್ಷಿಯಂತೆ ಎದುರು ನೋಡುತ್ತಿದ್ದಾನೆ ವಸುಪಾಲ. ಆ ತೀರಿಕೊಂಡ ಮಹೀಪಾಲನೇ ನಿನ್ನ ದೊಡ್ಡಪ್ಪ; ಆತನೇ ತನ್ನ ಆತ್ಮಕ್ಕೆ ಶಾಂತಿಯನ್ನುಂಟುಮಾಡೆಂದು ದಿನಾ ನಿನಗೆ ಕನಸಿನಲ್ಲಿ ಕಾಣಿಸಿಕೊಂಡು ಕೇಳಿಕೊಳ್ಳುತ್ತಿದ್ದಾನೆ" ಎಂದು ಹೇಳಿದ ಮಿತ್ರಾನಂದ.

ಮತ್ತೆ ಮುಂದುವರಿಸಿ "ಕುಮಾರಾ, ಚಿತ್ರಭಾನೂ, ಆ ರತ್ನಕಿರೀಟ ಸಂಪಾದಿಸಿ ತೆಗೆದುಕೊಂಡು ಬರುವುದರಿಂದ ನಿನ್ನ ದೊಡ್ಡಪ್ಪನ ಆತ್ಮಕ್ಕೆ ಶಾಂತಿಯುಂಟಾಗುತ್ತದೆ; ಕುಟುಂಬ ಗೌರವವು ನಿಲ್ಲುತ್ತದೆ. ನಿನ್ನ ಅಜ್ಜ ಅಮರ ಭೂಪತಿ ನಿನಗಾಗಿ ಕಾದು ಕುಳಿತಿದ್ದಾನೆ. ಮೊದಲು ಅಲ್ಲಿಗೆ ಹೋಗಿ, ಆತನ ಆಶೀರ್ವಾದ ಪಡೆದು ಮುಂದಿನ ಕಾರ್ಯಕ್ಕೆ ಕೈಹಾಕು. ನಿನಗೆ ಶುಭವಾಗುವುದು" ಎಂದು ಹಿತನುಡಿಗಳನ್ನಾಡಿದ. ಚಿತ್ರಭಾನು ಮಗಧ ರಾಜ್ಯಕ್ಕೆ ಹೊರಟ.

* * *

ಆದಿನ ಮಂದಪಾಲನು ಪ್ರಮೋದನನ್ನು ಅಗ್ನಿ ಪ್ರಮಾದದಿಂದ ಕಾಪಾಡಿ, ತರುವಾಯ ಭಾನು

తేజన హెండతియన్ను రక్షిసలు కారా గృహక్కె హొరటనెందు హేళిద్దేవష్టే?

ఆ సమయదల్లి ముదిరాజ ప్రమోదను తన్నన్ను యారూ గమనిసదంతే ఉపాయ వాగి అల్లింద జారికొండ. ఆ గలాటె యల్లి యారూ ఆతనన్ను గురుతు హిడియ లిల్ల. ఆ రాజ్యద ప్రజెగళే గురుతు హిడియదిరువాగ రాజగురు నేమిసిద భటరు గురుతు హచ్చువుదెందరేను?

కారాగృహదింద హొరబిద్ద ప్రమోదను అన్నాహారగళన్ను త్యజిసి, కాలు ఎళెదు కొండు హోదకడె నడెద.




ఒందెడె అమర భూపతియ చారరు కష్టపట్టు ప్రమోదన గురుతు హిడిదు, తమ్మరాజన బళిగె కరెదుకొండు హోదరు.

బేగను కాణిసలు అమరభూపతి పరమానంద భరితనాద. అష్టరల్లి చిత్ర భాననూ సహ మగధ రాజ్యవన్ను సేరి కొండ. బాలకనన్ను కండకూడలే ఆ వృద్ధరిబ్బరూ పట్ట ఆనందక్కె ఎణెయే ఇల్ల. బాలకను కైగొండ కార్యగళన్ను కేళి అవరు మెచ్చికొండురు; ఆనంద పట్టరు.

ఆదరె అవనొబ్బనే హోగువుదు ఆ వృద్ధరిగె సరి కండుబరలిల్ల. ఆగ అమర భూపతి తన్న మగనాద విజయభూపతి యన్నూ సహాయక్కె కొట్టు, ఇబ్బరిగూ ఆశీర్వాదమాడి, శుభ ముహూర్తదల్లి మంజుళ ద్వీపక్కె కళుహిసిద.

* * *

అల్లి కారాగృహద హత్తిర ఏను నడెయితు గొత్తే? మూర్ఛెగొండిద్ద రాజగురు చేతరిసికొండ. ఆదరె ఈ ప్రమాద హేగె సంభవిసితో ఆతనిగె అర్థవాగలిల్ల. ఇష్టొందు కష్ట సంభవిసిదరూ కేడు బగెయువ బుద్ధి మాత్ర బిడలిల్ల. తన్న హంచికె సఫలవాగలిల్లవల్లా ఎందు ముది రాజనన్ను కాపాడిద మందపాలనల్లి ద్వేష సాధిసతొడగిద.

ప్రమోదను కాణదిరలు ఆతన మనస్సి నల్లి ఆదొందురీతి కళవళవుంటాయితు.






ಆದರೂ ಸ್ವಲ್ಪ ದಿನಗಳಾದಮೇಲೆ "ಹೋಗಲಿ ಆ ಮುದಿಗೊಡ್ಡು ಎಲ್ಲಿ ಸತ್ತರೆ ನನಗೇನು?" ಎಂದು ಒಂದು ರೀತಿ ಉದಾಸೀನ ಬಂತು.

ಒಂದು ದಿನ ಮಂದಪಾಲನು ಅನ್ಯಮನಸ್ಕನಾಗಿದ್ದಾಗ ರಾಜಗುರು ತನ್ನ ಬಾಕುವಿನಿಂದ ಆತನನ್ನು ಕೊಂದು, ಆ ಅಪರಾಧವನ್ನು ಅಮಾಯಕನೊಬ್ಬನ ಮೇಲೆ ಹೊರಿಸಿ ಅವನನ್ನೂ ಗಲ್ಲಿಗೇರಿಸಿದ.

ರಾಜಗುರು ಏನೋ ಮೋಸಮಾಡಿ ಮುದಿ ರಾಜನನ್ನು ಕೊಂದಿರಬಹುದೆಂದು ಪ್ರಜೆಗಳಲ್ಲಿ ಊಹಾಪೋಹವೆದ್ದಿತು. ಅಷ್ಟೇ ಅಲ್ಲ. ಕಪ್ಪಕಾಣಿಕೆಗಳಿಗಾಗಿ ರಾಜಗುರು ಕೊಡುತ್ತಿದ್ದ ಕಿರುಕುಳವನ್ನು ತಡೆಯಲಾರದೆ ಅನೇಕ ಸಾಮಂತ ರಾಜರು ಮತ್ತೆ ಅಮರ ಭೂಪತಿಯನ್ನು ಆಶ್ರಯಿಸಿದರು. ಆಗ ಅಮರ ಭೂಪತಿಗೆ ಸಲಹೆಗಾರನೆಂದರೆ ವೃದ್ಧರಾಜನಾದ ಪ್ರಮೋದ.

ಪ್ರಮೋದ ತುಂಬಾ ದೀರ್ಘಾಲೋಚನೆ ಮಾಡಿ ಈಗ ಭಲ್ಲಾಣ ಕೋಟೆಗೆ ಮುತ್ತಿಗೆ ಹಾಕುವುದು ಉಚಿತವೆಂದ.

ಸಾಮಂತ ರಾಜರೆಲ್ಲಾ ಒಟ್ಟುಗೂಡಿ ಒಂದು ರಾತ್ರಿ ಭಲ್ಲಾಣ ಕೋಟೆಯನ್ನು ಮುತ್ತಿದರು. ಬಲವೆಲ್ಲಾ ಉಡುಗಿಹೋಗಿದ್ದ ರಾಜಗುರು ಬೆದರಿದ. ಸುರಂಗ ಮಾರ್ಗದಿಂದ ತಪ್ಪಿಸಿಕೊಂಡು ಹೋಗಲು ನೋಡಿದ.

ಎರಡು ಹೆಜ್ಜೆ ಮುಂದೆ ಇಟ್ಟನೋ ಇಲ್ಲವೋ ಅಮರ ಭೂಪತಿಯ ಭಟರು ಅವನನ್ನು ಹಿಡಿದುಬಿಟ್ಟರು. ರಾಜಗುರುವಿನ ಮುಖ ಬಿಳಿಚಿಕೊಂಡಿತು. ರಹಸ್ಯದ್ವಾರಗಳಲ್ಲೆಲ್ಲಾ ಪ್ರಮೋದನು ಕಾವಲಿರಿಸಿದ್ದ ವಿಷಯ ಅವನಿಗೆ ಹೇಗೆ ತಿಳಿಯಬೇಕು? ಕೋಟೆ ಪ್ರಮೋದನ ವಶವಾಯಿತು. ಸಾಮಂತ ರಾಜರು ಸಂತೋಷಪಟ್ಟರು. ಪ್ರಜೆಗಳು ಪರಮಾನಂದ ಭರಿತರಾದರು. ರಾಜ್ಯ ಮತ್ತೊಂದುಸಾರಿ ಹಿಂದಿನ ಸ್ಥಿತಿಗೆ ಬಂತು. ಎಲ್ಲರೂ ಬಾಲಕರಿಗಾಗಿ ಎದುರು ನೋಡುತ್ತಿದ್ದರು.

ಚಿತ್ರಭಾನೂ, ವಿಜಯಭೂಪತಿ ಅನೇಕ ಕಷ್ಟಗಳನ್ನು ಅನುಭವಿಸಿ ಕೊನೆಗೆ ಮಂಜುಳ ದ್ವೀಪವನ್ನು ಸೇರಿಕೊಂಡರು. ವಸುಪಾಲ ಅವರಿಬ್ಬರನ್ನೂ ಬಹುಬಗೆಯಾಗಿ ಆದರಿಸಿ, ಗೌರವಿಸಿದ. "ನಿಮಗಾಗಿಯೇ ಎದುರು ನೋಡುತ್ತಿರುವೆನು" ಎಂದ. "ಈ ರತ್ನಕಿರೀಟ



ನುತ್ತೆ ಅದರ ಒಡೆಯರ ವಂಶ ಸೇರುವುದು ತುಂಬಾ ಸಂತೋಷಕರವಾದವಿಷಯ" ಎಂದು ಹೇಳಿದ.

ಎಲ್ಲರೂ ಅರಣ್ಯವನ್ನು ಸೇರಿದರು. ಮರವನ್ನು ಸುತ್ತಿಕೊಂಡಿದ್ದ ಭೂತ ಸರ್ಪವನ್ನು ಕುರಿತು ವಸುಪಾಲನು ಚಿತ್ರಭಾನುವಿಗೆ ಎಚ್ಚರಿಕೆಕೊಟ್ಟ.

ಕಿರೀಟ ಹೇಗಾದರೂ ಮಾಡಿತರಬೇಕೆಂಬುದೊಂದೇ ಚಿತ್ರಭಾನನ ಆಶಯ. ಏನಾದರೂ ಆಗಲೀ ಎಂದು ಸಾಹಸ ಮಾಡಿ ಮರದ ಹತ್ತಿರ ಹೋದ.

ಭಯಾಶ್ಚರ್ಯಗಳಿಂದ ಎಲ್ಲರೂ ಆತನನ್ನು ನೋಡುತ್ತಿದ್ದರು. ಸರ್‍ರನೆ ಒರೆಯಿಂದ ಖಡ್ಗವನ್ನು ತೆಗೆದ. ಸರ್ಪದಮೇಲೊಂದು ಏಟು ಹಾಕಲು ಹವಣಿಸಿದ. ಅಷ್ಟರಲ್ಲಿ ಆಶ್ಚರ್ಯಕರವಾದ ಕೆಲಸವೊಂದಾಯಿತು. ಆಗ ಖಡ್ಗ ತಾಕಿತೋ ಇಲ್ಲವೋ ಅನ್ನುವಷ್ಟರಲ್ಲಿ ಆ ಸರ್ಪ ಒಬ್ಬ ಗಂಧರ್ವನ ರೂಪ ತಾಳಿತು.

ಆಗ ಗಂಧರ್ವನು ಮರದ ಮೇಲಿದ್ದ ರತ್ನ ಕಿರೀಟವನ್ನು ತಂದು ಚಿತ್ರಭಾನುವಿನ ಕೈಗೆ ಕೊಡುತ್ತಾ,

"ಅಪ್ಪಾ, ಮಗೂ, ನನಗೆ ಶಾಪವಿಮುಕ್ತಿ ಮಾಡಿದೆ. ಇಷ್ಟುದಿನ ಇದಕ್ಕೆಂತಲೇ ನಾನು ಎಲ್ಲರ ಕನಸಿನಲ್ಲಿಯೂ ಕಾಣಿಸಿಕೊಂಡು ನನ್ನ ಆತ್ಮಕ್ಕೆಶಾಂತಿಯನ್ನುಂಟು ಮಾಡುವಂತೆ ಕೇಳಿಕೊಳ್ಳುತ್ತಿದ್ದೆ. ಈ ಕಾರ್ಯ ಯಾರೂ ನೆರವೇರಿಸದಾದರು. ಎಂದಿಗಾದರೂ ನೀನೇ



ಈ ಕಾರ್ಯಕ್ಕೆ ತಕ್ಕವನು ಎಂದೆಣಿಸಿದ್ದೆ. ಯುದ್ಧದಲ್ಲಿ ಪ್ರಾಣಬಿಟ್ಟರೂ ಈ ಭೂತ ಸರ್ಪದ ಆಕಾರ ತಾಳಬೇಕಾಯಿತು. ವಂಶಮರ್ಯಾದೆಯನ್ನು ನಿಲ್ಲಿಸಿ, ನನ್ನ ಆತ್ಮಕ್ಕೆ ಶಾಂತಿಯನ್ನು ಉಂಟು ಮಾಡಿದ ನಿನಗೆ ಈ ರತ್ನಕಿರೀಟ ಒಪ್ಪಿಸಿರುವೆನು. ಇನ್ನು ನನಗೆ ಯಾವ ಚಿಂತೆಯೂ ಇಲ್ಲ." ಎಂದು ಹೇಳಿ ಗಂಧರ್ವ ರೂಪದಲ್ಲಿದ್ದ ಮಹೀಪಾಲ ಅದೃಶ್ಯನಾದ.

ಇದೆಲ್ಲವನ್ನೂ ನೋಡುತ್ತಿದ್ದ ವಸುಪಾಲನಿಗೆ ಆಶ್ಚರ್ಯವಾಯಿತು. ಅಷ್ಟೇ ಅಲ್ಲ, ಹೇಗಾದರೂ ಮಾಡಿ ಆ ಕಿರೀಟವನ್ನು ಹಾರಿಸಿಬಿಡಬೇಕೆಂಬ ಮನಸ್ಸಾಯಿತು. ತನ್ನ ಉದ್ದೇಶವನ್ನು ಹೆಂಡತಿಗೆ ಹೇಳಿದ. ಗಂಡ ಹೆಂಡಿರು ಆಡುತ್ತಿದ್ದ ಮಾತುಗಳು ಆತನ ಮಗಳಾದ ಜಯಂತಿಗೆ ಕೇಳಿಸಿತು.



ಹೇಗಾದರೂ ಮಾಡಿ ಬಾಲಕರಿಬ್ಬರನ್ನೂ ಕಾಪಾಡಬೇಕೆಂದು ನಿಶ್ಚಯಿಸಿದಳು ಜಯಂತಿ. ತನ್ನ ಸಖಿಯರ ಸಹಾಯದಿಂದ ನಡುರಾತ್ರಿಯ ವೇಳೆಗೆ ಮೂರು ಕುದುರೆಗಳನ್ನು ಸಿದ್ಧಮಾಡಿಸಿದಳು. ಕತ್ತಲಾದಮೇಲೆ ಚಿತ್ರಭಾನನೂ ವಿಜಯ ಭೂಪತಿಯೂ ಇದ್ದ ಕೊಠಡಿಗೆ ಹೋಗಿ, ಕೂಡಲೇ ಹೊರಗೆ ಬರುವಂತೆ ಮನವಿಮಾಡಿಕೊಂಡಳು. ಅವರು ಸಂಶಯ ಗ್ರಸ್ತರಾಗಿರುವುದನ್ನು ಕಂಡು ಜಯಂತಿ ಹೀಗೆಂದಳು :

"ನನ್ನ ಮಾತು ಕೇಳಿ ನನ್ನ ತಂದೆ ನಿಮ್ಮನ್ನು ಕೊಲ್ಲಲು ಬರುತ್ತಿದ್ದಾನೆ. ನಮ್ಮ ತಾಯಿಯೊಂದಿಗೆ ಹಾಗೆ ಹೇಳುವುದನ್ನು ನಾನು ಕೇಳಿದೆ. ರತ್ನಕಿರೀಟಕ್ಕಾಗಿ ಈ ದ್ವೀಪದಮೇಲೆ ದಂಡೆತ್ತಿಬಂದ ನನ್ನ ತಂದೆ, ಆದನ್ನು ನೀವು ತೆಗೆದುಕೊಂಡು ಹೋಗುವುದನ್ನು ನೋಡುತ್ತ ಸುಮ್ಮನಿರುವನೇ? ನೀವಿಬ್ಬರೂ ಈ ದ್ವೀಪದಲ್ಲಿ ಕಾಲಿಡುವಾಗಲೇ ನಾನು ಅಂತಃಪುರದಿಂದ ನಿಮ್ಮನ್ನು ನೋಡಿದೆ. ನಿಮಗೆ ಯಾವ ರೀತಿಯ ಅಪಾಯವೂ ಇಲ್ಲದಂತೆ ಮಾಡಬೇಕೆಂದು ಎಲ್ಲ ದೇವರಲ್ಲೂ ಹರಕೆ ಹೊತ್ತೆ. ನನ್ನ ತಂದೆ ತುಂಬಾ ದುರಾಶೆಯುಳ್ಳವನು. ಹಾಗಿಲ್ಲದ ಪಕ್ಷಕ್ಕೆ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಒಬ್ಬಳೇ ಮಗಳನ್ನು ಮುದುಕನೊಬ್ಬನಿಗೆ ಕೊಟ್ಟು ವಿವಾಹ ಮಾಡಲು ನಿರ್ಧರಿಸುವನೆ? ನನಗೆ ತಾಯಿ ಇದ್ದೂ ಒಂದೇ, ಇಲ್ಲದಿದ್ದರೂ ಒಂದೇ. ಆಕೆಗೆ ನಮ್ಮ ತಂದೆಗಿಂತಲೂ ಹಣದ ಮೇಲೆ ಮೋಹ ಹೆಚ್ಚು. ಅದಕ್ಕಾಗಿ ಏನಾದರೂ ಮಾಡುವಳು. ನನ್ನನ್ನು ಈ ಆಪತ್ತಿನಿಂದ ಬಿಡಿಸಿ ನಿಮ್ಮೊಂದಿಗೆ ಕರೆದು ಕೊಂಡು ಹೋಗಿ. ಮೂವರೂ ತಪ್ಪಿಸಿಕೊಂಡು ಓಡಿಹೋಗೋಣ. ಎಲ್ಲವನ್ನೂ ಅಣಿ ಮಾಡಿ ಸಿದ್ಧೇನೆ"

ಅಂದು ರಾತ್ರಿಯೇ ವಸುಪಾಲ ಆ ಹುಡುಗರನ್ನು ಕೊಲ್ಲಲು ಹೊರಟ.

ಅಷ್ಟರಲ್ಲಿ ಒಬ್ಬಸೇವಕನು ಏದುತ್ತಾ ಬಂದು "ಪ್ರಭೂ, ರಾಜಕುಮಾರಿ ಅಂತಃಪುರದಲ್ಲಿ ಕಾಣಿಸುತ್ತಿಲ್ಲ. ಈ ವಿಷಯವನ್ನು ಮಹಾಸ್ವಾಮಿಯವರಿಗೆ ತಿಳಿಸೋಣವೆಂದು ಹೋದರೆ ದೇವರ ದರ್ಶನವಾಗಲಿಲ್ಲ. ಆದುದರಿಂದ ಹುಡುಕುತ್ತಾ ಇಲ್ಲಿಗೆ ಬಂದೆ" ಎಂದ. ಈ ಮಾತುಗಳನ್ನು ಕೇಳುತ್ತಲೇ ವಸುಪಾಲ

ತಾನು ಬಂದ ಕಾರ್ಯವನ್ನು ಮರೆತು ಅಂತ ಪುರದ ಕಡೆ ಧಾವಿಸಿದ.

ಅದೇ ಸಮಯಕ್ಕೆ ಆ ಕೊಠಡಿಯಿಂದ ಮೂವರು ರತ್ನಕಿರೀಟದೊಂದಿಗೆ ಹೊರಬಿದ್ದು ಸಿದ್ಧವಾಗಿದ್ದ ಅಶ್ವಗಳ ಮೇಲೇರಿದರು. ಮಹಡಿಯ ಮೇಲಿದ್ದ ರಾಜ ಇವರನ್ನು ನೋಡಿಬಿಟ್ಟ. ಇವರ ಸಂಚನ್ನು ಕೂಡಲೇ ತಿಳಿದುಕೊಂಡು ತನ್ನ ನಡುವಿನಲ್ಲಿದ್ದ ಬಾಕು ತೆಗೆದು ಅವರಕಡೆ ಎಸೆದ. ದುರದೃಷ್ಟವಶಾತ್ ಅದು ಚಿತ್ರಭಾನುವಿನ ಬೆನ್ನಿಗೆ ನಾಟಿತು. ಚಿತ್ರಭಾನು ಅದನ್ನು ಕಿತ್ತು ಬಿಸುಟ.




ಅರಮನೆಯಿಂದ ವಸುಪಾಲ "ಹಿಡಿಯಿರಿ, ಹಿಡಿಯಿರಿ" ಎಂದು ಕೂಗುತ್ತಿದ್ದ. ಕೂಡಲೇ ಸವಾರರು ಬೆನ್ನಟ್ಟಿದರು. ಆದರೆ ಅವರನ್ನು ಹಿಡಿಯಲು ಸಾಧ್ಯವಾಗಲಿಲ್ಲ.

ಅವರು ಮೂವರೂ ತೀರವನ್ನು ಸೇರಿ, ಹಡಗಿಗೆ ಲಂಗರು ಬಿಚ್ಚಿ ಕ್ಷಣಮಾತ್ರದಲ್ಲಿ ಮುಂದಕ್ಕೆ ಪ್ರಯಾಣ ಮಾಡಿದರು. ಹಿಂಬಾಲಿಸಿಕೊಂಡು ಬಂದ ನೌಕರರು ಮತ್ತೇನೂ ಮಾಡಲಾರದೆ ಅವರು ಹೋಗುತ್ತಿರುವುದನ್ನು ಬೆಕ್ಕಸಬೆರಗಾಗಿ ನೋಡುತ್ತಾ ನಿಂತಿದ್ದರು.

ಹಡಗನ್ನೇರಿದ ಕೂಡಲೇ ಜಯಂತಿ, ವಿಜಯಭೂಪತಿ ಸೇರಿ ಚಿತ್ರಭಾನುವಿಗೆ ಸಮಸ್ತ ಉಪಚಾರಗಳನ್ನೂ ಮಾಡಿದರು. ಏನು ಮಾಡಿದರೇನು? ಆ ಬಾಕು ವಿಷಪೂರಿತವಾದುದರಿಂದ ಅದರ ಕೆಲಸ ಅದು ಮಾಡುತ್ತಲೇ ಇತ್ತು. ಆದರೂ ಚಿತ್ರಭಾನು ಎದೆಗುಂದಲಿಲ್ಲ. ತನ್ನ ಬಾಧೆಯನ್ನು ಹೊರಗೆ ತೋರಗೊಡಲಿಲ್ಲ.

ಅಲ್ಲಿ ಭಲ್ಲಾಣ ರಾಜ್ಯದಲ್ಲಿ ಏನು ನಡೆಯಿತು ಗೊತ್ತೇ? ಹಡಗು ಬಂದಿತೆಂದ ಕೂಡಲೇ ಎಲ್ಲ ಜನರೂ ಆನಂದದಿಂದ ಉಬ್ಬಿ ಉದ್ಗಾರವೆಳೆದರು. ಚಿತ್ರಭಾನು ರತ್ನಕಿರೀಟವನ್ನು ತಾತನ ಕೈಗೆಕೊಟ್ಟ. ಪ್ರಮೋದನ ಆನಂದ ಹೇಳತೀರದು. ಅಮರ ಭೂಪತಿಯೊಂದಿಗೆ ಮೊಮ್ಮಗನ ಪಟ್ಟಾಭಿಷೇಕಕ್ಕೆ ತಕ್ಕ ಏರ್ಪಾಟು ಮಾಡುವಂತೆ ಹೇಳಿದ.

ಆದರೆ ಅಷ್ಟರಲ್ಲಿ ಚಿತ್ರಭಾನನ ಸ್ಥಿತಿ ಉತ್ಕಟವಾಯಿತು. ಕೂಡಲೇ ರಾಜನು ಮಿತ್ರಾನಂದನ ಹತ್ತಿರಕ್ಕೆ ಜನರನ್ನು ಕಳುಹಿಸಿದ. ಆಗಾಗಲೇ ಯಜ್ಞಯಾಗಾದಿಗಳನ್ನು ಮುಗಿಸಿಕೊಂಡು ಆತನೆಲ್ಲೋ ಹೊರಟು ಹೋಗಿದ್ದ.

ಚಿತ್ರಭಾನನ ಪಟ್ಟಾಭಿಷೇಕ ಮುಹೂರ್ತವು ಸಮಿಾಪಿಸಿತು.

ಆದರೆ ಆತನು ಹಾಸಿಗೆಯ ಮೇಲೆಯೇ ಮಲಗಿದ್ದ. ಸುತ್ತಲೂ ಆತನ ಬಂಧು ಬಳಗ ನೆರೆದಿದ್ದರು. ಚಿತ್ರಭಾನು ಎಲ್ಲರ ಕಡೆಗೂ ಒಂದುಸಾರಿ ನೋಡಿದ. ಜಯಂತಿ ಮತ್ತು ವಿಜಯಭೂಪತಿಯ ಕೈಗಳನ್ನು ಜೊತೆಯಾಗಿ ಹಿಡಿದು, ಗಳಗಳನೆ ಕಂಬನಿ ಮಿಡಿಯುತ್ತಾ ಕಣ್ಣುಮುಚ್ಚಿದ. ಭಲ್ಲಾಣರಾಜ್ಯ ದುಃಖ ಸಾಗರದಲ್ಲಿ ಮುಳುಗಿತು.

ವೃದ್ಧರಾಜನಾದ ಪ್ರಮೋದನಿಗೆ ಹೊಟ್ಟೆಯಲ್ಲಿ ಬೆಂಕಿಯಿಟ್ಟಂತಾಯಿತು. ಆತನ ಕಣ್ಣುಗಳಿಂದ ಕಂಬನಿ ಕೋಡಿ ಹರಿಯಿತು. ಮರುಕ್ಷಣದಲ್ಲಿ ಕಣ್ಣುಗಳು ಕೆಂಡದಂತೆ ಕೆಂಪಾದವು. ರತ್ನಕಿರೀಟದಮೇಲೆ ಎಲ್ಲಿಲ್ಲದ ಕೋಪ ಜನಿಸಿತು. ರತ್ನಕಿರೀಟವಿದ್ದೆಡೆಗೆ ಗಬಗಬನೆ ಹೋಗಿ ಅದನ್ನು ತೆಗೆದು ನೆಲದ ಮೇಲೆ ಅಪ್ಪಳಿಸಿದ. ಅದು ಚೂರು ಚೂರಾಯಿತು. ರತ್ನಗಳೆಲ್ಲಾ ಚೂರುಚೂರಾಗಿ ಮಿಣುಕು ಹುಳುಗಳಂತೆ ಮೆರೆಯುತ್ತಾ ಚಲ್ಲಾಪಿಲ್ಲಿಯಾಗಿ ಚದುರಿದವು. "ನಮ್ಮ ವಂಶವನ್ನು ನಿರ್ಮೂಲ ಮಾಡಿದ ಈ ರತ್ನಕಿರೀಟವಿದ್ದರೆಷ್ಟು, ಹೋದರೆಷ್ಟು?.... ಅಯ್ಯೋ, ನನ್ನ ಕಂದ ಚಿತ್ರಭಾನು ಸಿಂಹಾಸನಾರೂಢನಾಗಿ ಈ ಕಿರೀಟವನ್ನು ಧರಿಸಿರುವುದನ್ನು ನೋಡುವ ಭಾಗ್ಯ ನನಗಿಲ್ಲದಾಯಿತಲ್ಲಾ! ಅವನ ಪಟ್ಟಾಭಿಷೇಕ ಒಂದು ಕನಸು ಕಂಡಂತಾಯಿತಲ್ಲಾ, ನನ್ನ ಆಶೆಗಳೆಲ್ಲವೂ ಮಣ್ಣುಪಾಲಾದವಲ್ಲಾ... ಇನ್ನೂ ನಾನು ಬದುಕಿದ್ದು ಏನುಫಲ?" ಎಂದು ಪರಿಪರಿವಿಧದಲ್ಲಿ ಪ್ರಲಾಪಿಸಿದನು.

ಮರುಕ್ಷಣವೇ ಉಗ್ರನಾದ. ಮೈಯೆಲ್ಲಾ ಕೋಪದಿಂದ ತರತರನೆ ನಡುಗಿತು. ಕಾಲುಗಳು ಗಡಗಡ ನಡುಗಿದುವು. ತಾಳಲಾರದಷ್ಟು ಆವೇಶ ಬಂದು, ಮೈಮೇಲಿದ್ದ ಬಟ್ಟೆಗಳನ್ನು ಹರಿದುಕೊಂಡ. ಹುಚ್ಚನಂತೆ ಅತ್ತಿತ್ತ ಅಡಿಯಿಡುತ್ತಾ "ಎಲ್ಲಿ, ನನ್ನನ್ನೂ ನನ್ನ ಕುಟುಂಬವನ್ನೂ ನಾಶಮಾಡಿದ ಆ ಚಂಡಾಲ ರಾಜಗುರುವೆಲ್ಲಿ? ಆ ದುರುಳನೆಲ್ಲಿ? ಎಲ್ಲಿ ಆ ರಾಜಗುರು?" ಎಂದು ಗಟ್ಟಿಯಾಗಿ ಅರಚಿದ.

ರಾಜನ ಕಾಲುಗಳು ರತ್ನದ ಚೂರುಗಳ ಮೇಲೆ ಬಿದ್ದ ಕೂಡಲೇ ಸರ್ರನೆ ಜಾರಿದ. ಮತ್ತೆ ಏಳಲಿಲ್ಲ!!






ಸ್ಟೈಯಿನ್‌ಮೆಟ್ಜ್ ಪ್ರಸಿದ್ಧ ವಿಜ್ಞಾನಿ. ಆತನು ಪರಿಶೋಧನೆ ಮಾಡಿ ಅನೇಕ ಗಹನವಾದ ವಿಷಯುಗಳನ್ನು ಕಂಡುಹಿಡಿದಿದ್ದಾನೆ.

ಆತನಿದ್ದ ದೇಶದಲ್ಲಿ ಚಳಿ ತುಂಬಾ ಹೆಚ್ಚು. ಚಳಿ ಎಂದರೆ ಅಷ್ಟಿಷ್ಟಲ್ಲ. ನೀರು ಬೆಳಗಾಗುವ ವೇಳೆಗೆ ಮಂಜಿನ ಗಡ್ಡೆಯಾಗಿಬಿಡುತ್ತಿತ್ತು.

ಆದುದರಿಂದಲೇ ಆತನು ಪ್ರಯೋಗಶಾಲೆಯಲ್ಲಿ ದೊಡ್ಡದೊಂದು ಒಲೆಯನ್ನು ಹಾಕಿಸಿ, ಅದರಲ್ಲಿ ಬೆಳಗಾದ ಕೂಡಲೇ ಬೆಂಕಿ ಹೊತ್ತಿಸಿ ಆ ಬೆಂಕಿಯ ಹತ್ತಿರ ಕುಳಿತುಕೊಂಡು ತನ್ನ ಪ್ರಯೋಗಗಳನ್ನು ನಡೆಸುವನು.

ಬೆಳಗ್ಗೆ ಬೆಂಕಿ ಹೊತ್ತಿಸಲು ಅನುಕೂಲವಾಗಿರಲು ಹಿಂದಿನದಿನ ರಾತ್ರಿ ಮಲಗುವ ಮುನ್ನ ಕೆಲಸಕ್ಕೆ ಬಾರದ ಕಾಗದದ ಚೂರುಗಳನ್ನೂ ಹಳೇ ಬಟ್ಟೆಗಳನ್ನೂ ಆ ಒಲೆಯಲ್ಲಿ ಚೆಲ್ಲುವುದು ವಾಡಿಕೆ.

ಒಂದು ದಿನ ಬೆಳಗ್ಗೆ ಆತನು ಮಾಮೂಲಿನಂತೆ ಎದ್ದು ಒಲೆಯನ್ನು ಹಚ್ಚಿಸಲು ಬೆಂಕಿ ಕಡ್ಡಿ ತೆಗೆದುಕೊಂಡು ಹೊರಟ. ಬೆಂಕಿಕಡ್ಡಿ ಗೀಚಿ ಆ ಚಿಂದಿಯನ್ನು ಹೊತ್ತಿಸಲು ಬಗ್ಗಿದ. ಆದರೇಕೋ ಕಡ್ಡಿ ಹೊತ್ತಿಕೊಂಡ ಕೂಡಲೇ ಕೈಯನ್ನು ಹಿಂದಕ್ಕೆಳೆದು, ಅದನ್ನು ಉಫ್ ಎಂದು ಊದಿಬಿಟ್ಟು ಅಲ್ಲಿಂದ ಹೊರಬಿದ್ದ.

ಅಂದು ಎಂದಿಗಿಂತಲೂ ಹೆಚ್ಚು ಚಳಿ. ರಕ್ತ ಹೆಪ್ಪುಕಟ್ಟುವಂತೆ ಆಗುತ್ತಿತ್ತು. ಚಳಿ ದೇಶದಲ್ಲಿ ಜನರು ಅವರ ಕಾಲುಗಳಿಗೆ ಉಣ್ಣೆಯಿಂದ ತಯಾರಾದ ಕಾಲುಚೀಲ, ಕೈಗೆ ಗ್ಲೌಸ್ ತೊಟ್ಟುಕೊಳ್ಳುವುದು ಪದ್ಧತಿ. ಮೈತುಂಬ ಮುಚ್ಚಿಕೊಳ್ಳಲು ಸ್ವೆಟ್ಟರ್, ಮೇಲೆ ದಪ್ಪವಾದ ಕೋಟು ಹಾಕಿಕೊಳ್ಳುವರು. ಚಳಿಯ ಬಾಧೆಯನ್ನು ತಪ್ಪಿಸಿಕೊಳ್ಳಲು ಏನೆಲ್ಲಾ ಸಾಧನೆ ಮಾಡಬೇಕೋ ಅವನ್ನೆಲ್ಲಾ ಮಾಡಿಕೊಳ್ಳುವರು.

ಸ್ಟೈಯಿನ್‌ಮೆಟ್ಜ್ ಅವುಗಳನ್ನೆಲ್ಲಾ ಹಾಕಿಕೊಂಡಿದ್ದಾನೆ. ಆದರೂ ಚಳಿಯಿಂದ ನಡುಗುತ್ತಿದ್ದಾನೆ.

ದಪ್ಪನೆದು ರಗ್ಗೊಂದನ್ನು ಹೊದ್ದುಕೊಂಡು ಕಾಗದದ ಮೇಲೆ ಏನೋ ಬರೆಯಲು ಪ್ರಾರಂಭಿಸಿದ.

ಸಿ. ಪದ್ಮನಾಭ, ಕೊಯಂಬತ್ತೂರು



ಚಳಿಯಿಂದ ಆತನ ಕೈಗಳು ನಡುಗುತ್ತಿವೆ. ಅದು ಆತನ ಬರವಣಿಗೆಯೇ ಎಂದು ಸಂದೇಹ ಪಡುವಷ್ಟು ಅಕ್ಷರಗಳು ಸೊಟ್ಟಸೊಟ್ಟಗಿವೆ.

ಆ ಸಮಯದಲ್ಲಿ ಸ್ನೇಹಿತನೊಬ್ಬನು ಸ್ಟೈರ್ಯಿಮೆಟ್ಜುವನ್ನು ನೋಡುಲು ಬಂದ.

ನಮ್ಮ ದೇಶದಲ್ಲಿ ಯಾರಾದರೂ ನಂಟರಿಷ್ಟರು ಬಂದರೆ ಅವರಿಗೆ ಮೊದಲು ಕಾಲು ತೊಳೆದುಕೊಳ್ಳಲು ನೀರು ಕೊಟ್ಟು ಆತರುವಾಯ.ಬಾಯಾರಿಕೆ ತೀರಿಸಿಕೊಳ್ಳಲು ಯಾವುದಾದರೊಂದು ಪಾನೀಯ ಕೊಡುವುದು ವಾಡಿಕೆ; ಮರ್ಯಾದೆ.

ಆದರೆ ಚಳಿ ದೇಶಗಳಲ್ಲಿ ಉರಿಯುತ್ತಿರುವ ಒಲೆಯಲ್ಲಿ ಮತ್ತೊಂದು ಸೌದೆಯ ತುಂಡನ್ನು ಹಾಕಿ, ಶಾಖವನ್ನು ಮತ್ತಷ್ಟು ಹೆಚ್ಚು ಮಾಡಿ ಬೆಂಕಿ ಕಾಯಿಸಿಕೊಳ್ಳಲು ಅನುವು ಮಾಡುವುದು ಸಂಪ್ರದಾಯ.

ಸ್ಟೈರ್ಯಿಮೆಟ್ಜುವಿನ ಸ್ನೇಹಿತನಿಗೆ ಅಂದು ಈ ರೀತಿ ಯಾವ ಮರ್ಯಾದೆಯೂ ನಡೆಯಲಿಲ್ಲ.

ಮಿತ್ರನು ಬಹಳ ಆಶ್ಚರ್ಯಪಡುತ್ತ ಒಲೆಯ ಕಡೆ ನೋಡಿದ. ಅಲ್ಲಿ ಬೆಂಕಿ ಹೊತ್ತಿಸಿದ ಸುಳಿವೇ ಕಾಣಿಸಲಿಲ್ಲ.

ಆತನು ಇನ್ನಷ್ಟು ಆಶ್ಚರ್ಯದಿಂದ ಸ್ಟೈರ್ಯಿಮೆಟ್ಜುವಿನೊಂದಿಗೆ "ಏನು ಮಹರಾಯಾ, ಒಲೆ ಹೊತ್ತಿಸದೆಯೇ ಚಳಿಯನ್ನು ಹೋಗಲಾಡಿಸುವ ಶೋಧನೆ ಯಾವುದಾದರೂ ಕಂಡು ಹಿಡಿದಿರುವೆಯೇನು? ಯಾಕಿನ್ನೂ ಒಲೆ ಹೊತ್ತಿಸಿಲ್ಲ?" ಎಂದು ಕಿರುನಗೆ ಬೀರುತ್ತಾ ಕೇಳಿದ. ಆ ಮಾತುಗಳಲ್ಲಿ ತಿಳಿಹಾಸ್ಯ ಅಡಗಿತ್ತು.

ಸ್ಟೈರ್ಯಿಮೆಟ್ಜು ಏನೋ ಹೇಳಲು ಬಾಯಿ ತೆರೆದ. ಆದರೆ ಅಪರಿಮಿತವಾದ ಚಳಿಯಿಂದ ಆತನ ಗಂಟಲೂ ಸಹ ಒಣಗಿಹೋಗಿತ್ತು. ಸರಿಯಾದ ಉತ್ತರ ಹೇಳಲಾರದೆ ಹೋದ.

ಇದನ್ನು ನೋಡಿ ಆ ಸ್ನೇಹಿತ "ನಾನು ಬೆಂಕಿಹಚ್ಚುವೆನು. ಬೆಂಕಿಪೆಟ್ಟಿಗೆ ತಾ" ಎಂದು ಕೇಳಿದ.

ಸ್ಟೈರ್ಯಿಮೆಟ್ಜು "ಬೇಡ" ಎಂದು ಆತನನ್ನು ಒಲೆಯ ಹತ್ತಿರ ಕರೆದುಕೊಂಡು ಹೋಗಿ ಏನೋ ತೋರಿಸಿದ.

“ಏನು?” ಎಂದು ಮಿತ್ರನು ಬಗ್ಗಿ ಒಲೆಯಲ್ಲಿ ನೋಡಿದ. ಅಲ್ಲಿ ಏನಿತ್ತು?

ಹಿಂದಿನರಾತ್ರಿ ಸ್ಟೈಯಿನ್‌ಮೆಟ್ಜು ಅದರಲ್ಲಿ ಎಸೆದಿದ್ದ ಚಿಂದಿ ಬಟ್ಟೆಗಳಮೇಲೆ ಕೆಲ ಇಲಿ ಮರಿಗಳು ಕಾಣಿಸಿದವು.

ಅವುಗಳನ್ನು ನೋಡಿ “ಮರಿಗಳನ್ನಿಟ್ಟತೋ ಇಲ್ಲಿ?” ಎಂದ ಆ ಮಿತ್ರ.

“ಹೌದು, ರಾತ್ರಿ ಯಾವಾಗ ಇಟ್ಟಿತೋ ಏನೋ, ಬೆಳಗ್ಗೆ ಎದ್ದು ಬೆಂಕಿ ಹೊತ್ತಿಸಲು ಬಂದರೆ ಇವು ಕಾಣಿಸಿದವು” ಎಂದ ಸ್ಟೈಯಿನ್‌ಮೆಟ್ಜು.

“ಒಳ್ಳೇ ಚೆನ್ನಾಯಿತು. ಅಲ್ಲ, ಇದರಿಂದ ನೀನು ಒಲೆ ಹೊತ್ತಿಸದೆ ಚಳಿಯಿಂದ ಬಾಧೆ ಪಡುತ್ತಿರುವೆಯಾ?” ಎಂದನು ಮಿತ್ರ. ಒಂದು ರೀತಿ ಆವೇದನೆಯಿತ್ತು ಆತನ ಸ್ವರದಲ್ಲಿ.

“ಈ ಮರಿಗಳನ್ನು ತೆಗೆದು ಬೇರೊಂದೆಡೆ ಇಟ್ಟು, ಒಲೆ ಹೊತ್ತಿಸಬಾರದೆ? ಇವುಗಳಿಗಾಗಿ ನೀನು ಈ ಬಾಧೆಪಡುವುದೆಂದರೇನು” ಎಂದೆನ್ನುತ್ತಾ ಆ ಮಿತ್ರನು ಆ ಮರಿಗಳನ್ನು ಆ ಚಿಂದಿಗಳೊಂದಿಗೆ ಬೇರೊಂದೆಡೆಗೆ ಸಾಗಿಸಲು ಸಿದ್ಧನಾದ.

ಆಗ ಸ್ಟೈಯಿನ್‌ಮೆಟ್ಜು ಅಡ್ಡಬಂದು “ಬೇಡ, ಬೇಡ. ಅವುಗಳನ್ನು ಅಲ್ಲಿಂದ ಕದಲಿಸಬೇಡಿ. ಆ ಮರಿಗಳ ತಾಯಿ ಇಲ್ಲಿ ಬೆಚ್ಚಗೆ ಇರುವುದೆಂದು ಮರಿಗಳನ್ನಿಟ್ಟಿದೆ. ಇನ್ನೂ ಪಾಪ



ಕಣ್ಣಾದರೂ ತೆಗೆಯದ ಮರಿಗಳು ಇವು. ಈಗ ಇವುಗಳ ಜಾಗವನ್ನು ಬದಲಾಯಿಸಿದರೆ, ಇವು ಇರುವ ಸ್ಥಳ ತಿಳಿಯದೆ ಅದರ ತಾಯಿ ಬಂಧು ತೊಂದರೆ ಪಡಬಹುದು. ಅದರೂ ನಮಗೇನು ಅಷ್ಟು ಅವಸರ. ಕೆಲವುದಿನ ಸಹನೆ ವಹಿಸಿದರೆ ಇವು ದೊಡ್ಡವಾಗಿ ತಮ್ಮಷ್ಟಕ್ಕೆ ತಾವೇ ಹೊರಟು ಹೋಗುತ್ತವೆ” ಎಂದ.

ಸ್ಟೈಯಿನ್‌ಮೆಟ್ಜುವಿನ ಪ್ರಾಣಿದಯೆ ನೋಡಿ ಆತನ ಮಿತ್ರ ಆಶ್ಚರ್ಯಚಕಿತನಾದ.

ಆ ಚಳಿಯಲ್ಲಿ ಸ್ಟೈಯಿನ್‌ಮೆಟ್ಜು ಕಷ್ಟವಾದರೂ ಪಡಲು ಒಪ್ಪಿಕೊಂಡನೇ ಹೊರತು, ಒಲೆಯಲ್ಲಿದ್ದ ಆ ಇಲಿಮರಿಗಳ ಸ್ಥಾನ ಪಲ್ಲಟಕ್ಕೆ ಮಾತ್ರ ಅಂಗೀಕರಿಸಲಿಲ್ಲ.

# ಕತ್ತಲೆಯಲ್ಲಿ ನಾವು ನೋಡಲಾರೆವು—ಏಕೆ?



ಶಬ್ದವಿಲ್ಲದಿದ್ದರೆ ನಿಶ್ಶಬ್ದ ಎಂದು ಹೇಳುತ್ತೇವೆ. ಹಾಗೆ ಬೆಳಕು ಇಲ್ಲದಿದ್ದರೆ ಕತ್ತಲು ಎನ್ನುತ್ತೇವೆ. ನಮಗೆ ಬೆಳಕು ಎಲ್ಲೆಲ್ಲೂ ಕಾಣಿಸದಿರುವಾಗ "ಅಬ್ಬಾ ಇದೇನು ಕಾರ್ಗತ್ತಲೆ" ಎಂದು ಹೇಳುವೆವು. ಆದರೆ ಒಂದೊಂದುಸಾರಿ ಬೆಳಕು ಅತಿಅತಿಯಾಗಿ ವಾತಾವರಣದಲ್ಲಿ ವೇಗವಾಗಿ ಸಂಚರಿಸುವಾಗ ಸಹ ನಾವು ಅದನ್ನು ನೋಡಲಾರೆವು.

ಇದರಿಂದ ನಮಗೊಂದು ತಿಳಿದುಬರುತ್ತೆ. ನೋಡಲು ಮುಖ್ಯವಾದ ಅಂಶಗಳು ಎರಡು. ಒಂದು: ಹೊರಗೆ ಬೆಳಕು ಇರಬೇಕು. ಎರಡನೇಯದು, ಆ ಬೆಳಕನ್ನು ನೋಡುವ ಶಕ್ತಿ ನಮ್ಮಲ್ಲಿರಬೇಕು. ಕತ್ತಲಲ್ಲಿ ಬೆಳಕು ಇರುವುದಿಲ್ಲ. ನಾವು ನೋಡುವುದು ಬೆಳಕನ್ನು! ಆದುದರಿಂದ ನಾವು ಬೆಳಕನ್ನು ಕತ್ತಲೆಯಲ್ಲಿ ನೋಡಲಾರೆವು. ಅಷ್ಟೇ ಅಲ್ಲದೆ ನೋಡಲು ನೇತ್ರಗಳಿರಬೇಕು.

ಕತ್ತಲೆ ಕೋಣೆಯಲ್ಲಿ ಒಂದು ಮೇಜಿದೆ ಎಂದು ತಿಳಿಯುವ. ಆದರೆ ನಾವದನ್ನು ನೋಡಲಾರೆವು. ಏಕೆ? ಅಲ್ಲಿ ಬೆಳಕು ಇಲ್ಲ! ಮೇಜು ಕಾಣಿಸುವುದು ಎಂದರೆ ಅರ್ಥ, ಮೇಜಿನ ಮೇಲಿಂದ ಬರುವ ಬೆಳಕು ನಮ್ಮಿಂದ ನೋಡಲಾಗುತ್ತಿದೆ ಎಂದಂತಾಯಿತು.

ಅಷ್ಟೇ ಅಲ್ಲ. ಕುರುಡನಿಗೆ ಬೆಳಗಿನ ಹೊತ್ತು ಏನೂ ಕಾಣಿಸುವುದಿಲ್ಲವಷ್ಟೆ. ಆತನಿಗೆ ಬೆಳಕೂ ಸಹ ಕತ್ತಲೆಯೇ! ಇದರಿಂದ ಕತ್ತಲು ಎರಡು ವಿಧವಾಗಿ ಬರುವುದೆಂದು ತಿಳಿಯುತ್ತದೆ. ಒಂದು: ಬೆಳಕು ಇಲ್ಲದ ಪ್ರಯುಕ್ತ. ಎರಡನೇಯದು: ಬೆಳಕನ್ನು ನೋಡುವ ಶಕ್ತಿಯಿಲ್ಲದ ಪ್ರಯುಕ್ತ.

ಆದರೆ ಬೆಕ್ಕು, ಹುಲಿ ಮೊದಲಾದ ಪ್ರಾಣಿಗಳು ಕತ್ತಲೆಯಲ್ಲಿ ಹೇಗೆ ನೋಡವುವು? ಈ ಪ್ರಶ್ನೆಗೆ ಸಮಾಧಾನ ತಿಳಿಯುವ ಮೊದಲು ನಾವೊಂದು ವಿಷಯವನ್ನು ಗಮನಿಸಬೇಕು. ಅದೇನೆಂದರೆ ಒಂದಾದರೂ ಕಾಂತಿಕಿರಣವಿಲ್ಲದ ಕಾರ್ಗತ್ತಲೆಯಲ್ಲಿ ಯಾರೂ ಏನೂ ನೋಡಲಾರರು. ಸಾಧಾರಣವಾಗಿ ಹಾಗೆ ಇರುವುದೇ ಇಲ್ಲ. ನಾವು ಕತ್ತಲೆ ಅಂತ ಹೇಳಿದರೆ ಅದರ ಅರ್ಥ ಇಷ್ಟೇ; ಬೆಳಕು ನಾವು ನೋಡಲಾಗದಷ್ಟು ಕಡಿಮೆಯಾಗಿದೆ.

ನಮ್ಮ ಕಣ್ಣುಗಳು ತೀರಾ ಕಡಿಮೆ ಬೆಳಕನ್ನು ನೋಡಲು ಏರ್ಪಟ್ಟಿಲ್ಲ. ಕೆಲವು ಪ್ರಾಣಿಗಳ ಕಣ್ಣು ಗುಡ್ಡೆಗಳು ತುಂಬಾ ವಿಚಿತ್ರವಾಗಿ ನಿರ್ಮಿಸಲ್ಪಟ್ಟಿವೆ. ಅವು ಕತ್ತಲೆಯಲ್ಲಿ ಎಷ್ಟೇ ಕಡಿಮೆ ಬೆಳಕಾದರೂ ಉಪಯೋಗಿಸಿಕೊಳ್ಳಲು ಅರ್ಹವಾಗಿವೆ. ಅದರಿಂದಲೇ ಬೆಕ್ಕು, ಬೆಕ್ಕಿನ ಕಣ್ಣಿನಂತಿರುವ ನೇತ್ರಗಳುಳ್ಳ ಇತರ ಪ್ರಾಣಿಗಳು ನಾನೂ ನೀವೂ ನೋಡಲಾರದಷ್ಟು ಕಡಿಮೆ ಬೆಳಕಿನಲ್ಲೂ ಸಹ ನೋಡಬಲ್ಲವು.




ಹಿಂದೆ ಆನಂದ ನಗರವನ್ನು ನಿತ್ಯಾನಂದನೆಂಬ ರಾಜನು ಆಳುತ್ತಿದ್ದನು. ಆತನಿಗೆ ಭಾಸುರಾಂಗಿ ಎಂಬ ಒಬ್ಬಳೇ ಮಗಳು.

ಭಾಸುರಾಂಗಿ ಅತಿ ರೂಪವತಿ. ತ್ರಿಲೋಕ ಸುಂದರಿ ಎನ್ನಬಹುದು. ಆಗಿನ ಕಾಲದ ರಾಜ ಪುತ್ರಾರೆಲ್ಲಾ ಆಕೆಯನ್ನು ವಿವಾಹವಾಗಲು ಹಾತೊರೆಯುತ್ತಿದ್ದರು. ರಾಜನಿಗೆ ಇದೊಂದು ಸಮಸ್ಯೆಯಾಗಿ ಪರಿಣಮಿಸಿತು. ರಾಜ ಕುಮಾರಿಯ ವಿವಾಹ ಕುರಿತು, ರಾಜ, ಮಂತ್ರಿ ಮತ್ತಿತರ ಪ್ರಮುಖರು ಯೋಚಿಸಿ ಯೋಚಿಸಿ ಹಣ್ಣಾದರು.

"ನನ್ನ ಪತಿಯಾಗುವವನು ಜಗದೇಕವೀರ ನಾಗಿರಬೇಕು. ನಮ್ಮ ನೆರೆಯ ರಾಜ್ಯದ ವಜ್ರಕಾಯನನ್ನು ವಿಾರಿಸಿದ ವೀರರಿಲ್ಲ. ಆತ ನನ್ನು ಜಯಿಸಿದವನೇ ನನ್ನ ಪತಿ" ಎಂದಳು ರಾಜಕುಮಾರಿ.

ಈ ವಿಷಯ ರಾಜನಿಗೆ ತಿಳಿಯಿತು. ತನ್ನ ಮಗಳ ಬುದ್ಧಿವಂತಿಕೆಗೆ ತಲೆದೂಗಿದ ರಾಜ. ತನಗೆ ಸಮಿಾಪದಲ್ಲಿದ್ದ ತಿಮಿರ ದ್ವೀಪವನ್ನು ಪಾಲಿಸುವವ ವಜ್ರಕಾಯ ಮಹಾ ಕ್ರೂರಿ, ಬಲಶಾಲಿ ಎಂಬ ವಿಷಯ ಜನಜನಿತವಾಗಿದೆ. ರಾಜಕುಮಾರಿಯ ಷರತ್ತಿನ ಪ್ರಕಾರ ಆತನ ಮರಣ, ತನ್ನ ಮಗಳ ವಿವಾಹ ಎರಡೂ ಒಂದೇಸಾರಿ ನಡೆಯುವುದು. ಭಲೆ!" ಎಂದು ಕೊಂಡ.

ವಜ್ರಕಾಯನನ್ನು ಜಯಿಸಿದವರಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದಾಗಿ ರಾಜ ಪ್ರಕಟಿಸಿದ.

ಆ ಕೂಡಲೇ ಅನೇಕಜನ ರಾಜಕುಮಾರರು ತಿಮಿರ ದ್ವೀಪದ ಕಡೆ ಪ್ರಯಾಣ ಬೆಳೆಸಿದರು. ತಿಮಿರ ದ್ವೀಪ ಒಂದು ಸಣ್ಣ ರಾಜ್ಯ. ಆನಂದ ನಗರಕ್ಕೂ ಆ ದ್ವೀಪಕ್ಕೂ ನಡುವೆ ಒಂದು ಕಡ ಲ್ಗಾಲುವೆ. ಆ ದ್ವೀಪದ ರಾಜನಾದ ವಜ್ರಕಾಯ ಮಹಾ ಬಲಶಾಲಿ. ಆತ ಮತ್ತೊಂದು ದೇಶದ ಮೇಲೆದಂಡೆತ್ತಿ ಹೋಗುತ್ತಿರಲಿಲ್ಲ; ತನ್ನ ದೇಶಕ್ಕೆ ಯಾರಾದರೂ ಬಂದರೆ ತಕ್ಕ ಶಾಸ್ತಿ ಮಾಡದೆ ಬಿಡುತ್ತಿರಲಿಲ್ಲ. ಅಷ್ಟು ದೊಡ್ಡ ವೀರನಾಗಿದ್ದ. ರಾಜಕುಮಾರರು ಒಬ್ಬೊಬ್ಬರಾಗಿ

ಎಸ್. ಪಾಂಡುರಂಗನಾಯಕ, ಕುಂಬಳೆ






ತಿಮಿರದ್ವೀಪಕ್ಕೆ ಹೊರಟರೆಂದು ಈ ಮೊದಲೇ ಹೇಳಿದ್ದೇವೆ. ವಜ್ರಕಾಯನು ತುಂಬಾ ಬಲಶಾಲಿ ಎಂದೂ, ಅಜೇಯನೆಂದೂ ತಿಳಿದಿದ್ದೂ ಕೂಡ ಭಾಸುರಾಂಗಿಯನ್ನು ವಿವಾಹವಾಗಬಹುದೆಂಬ ಆಶೆಯಿಂದ ಬಹಳ ಜನ ಮುಂದೆ ಬಂದರು.

ತಿಮಿರ ದ್ವೀಪಕ್ಕೆ ಎದುರಾಗಿ ಸಮುದ್ರದ ಈಚೆಕಡೆ ದಡದಲ್ಲಿ ಒಂದು ಹಡಗಿನ ರೇವಿದೆ. ಹಡಗು ಹತ್ತಿ ಆ ಕಡಲ್ಗಾಲುವೆಯನ್ನು ದಾಟಿ ತಿಮಿರ ದ್ವೀಪದಲ್ಲಿ ಇಳಿಯಲು ಪ್ರಾರಂಭಿಸಿದರು ರಾಜಪುತ್ರರು.

ಮೊತ್ತಮೊದಲು ವಜ್ರಕಾಯನೊಂದಿಗೆ ಯುದ್ಧಕ್ಕೆ ನಿಲ್ಲುವ ಅವಕಾಶ ಕಾಂಚನ ದೇಶದ ರಾಜಕುಮಾರನಿಗೆ ಲಭಿಸಿತು. ಸಮುದ್ರದ ಈಚೆಕಡೆ ದಡದಲ್ಲಿ ಸಾವಿರಾರು ಜನರೊಂದಿಗೆ ನಿತ್ಯಾನಂದನೂ ರಾಜಕುಮಾರಿಯೂ ಕಾದಿದ್ದಾರೆ. ತಿಮಿರ ದ್ವೀಪದಲ್ಲಿ ಇಳಿದ ತರುವಾಯ ಕನಿಷ್ಠಪಕ್ಷ ಒಂದು ಗಂಟೆಯಾದರೂ ಕಳೆಯುವ ಮೊದಲೇ ಕಾಂಚನ ದೇಶದ ರಾಜಕುಮಾರ ಸಮುದ್ರದಕಡೆ ಓಡಿ ಬರುತ್ತಿರುವುದು ಎಲ್ಲರಿಗೂ ಕಾಣಿಸಿತು. ಮತ್ತೊಂದು ಗಂಟೆಗೆಲ್ಲಾ ರಾಜಕುಮಾರ ಹಡಗಿನಿಂದಿಳಿದ. ಏನು ನಡೆಯಿತೆಂದು ಕೇಳುವ ಮೊದಲೇ "ಅಯ್ಯೋ ನನ್ನ ಬಲಗೈ ಕಿರುಬೆರಳನ್ನು ಕತ್ತರಿಸಿಹಾಕಿದ. ಓ, ನೋವು, ನೋವು. ವೈದ್ಯರು ಯಾರೂ ಇಲ್ಲವೇ?" ಎಂದು ಬೊಬ್ಬೆಯಿಟ್ಟ.

ಸ್ವಲ್ಪ ಹೊತ್ತಿಗೆಲ್ಲಾ ವಜ್ರಕಾಯನು ಏನು ಮಾಡಿದನೋ ಎಲ್ಲರಿಗೂ ಗೊತ್ತಾಯಿತು. ತಿಮಿರ ದ್ವೀಪದಲ್ಲಿ ಕಾಂಚನ ದೇಶದ ರಾಜಕುಮಾರನು ಇಳಿದ ಕೂಡಲೇ ವಜ್ರಕಾಯನು ಸ್ವತಃ ಬಂದು ಖಡ್ಗ ಯುದ್ಧದಲ್ಲಿ ಆತನನ್ನು ಸೋಲಿಸಿ ಮಿಕ್ಕ ರಾಜಕುಮಾರರು ಎಚ್ಚರಿಕೆಯಿಂದ ಇರುವಂತೆ ಗುರುತಿಗಾಗಿ ಆತನ ಬಲಗೈ ಕಿರು ಬೆರಳನ್ನು ಕತ್ತರಿಸಿ ಜೀವ ಸಹಿತ ಬಿಟ್ಟ.

"ಬೆರಳು ಕತ್ತರಿಸಿ ಕಳುಹಿಸಿದ: ಕತ್ತು ಕತ್ತರಿಸಲಿಲ್ಲ" ಎಂದು ಅಲ್ಲಿದ್ದ ಜನಗಳೆಲ್ಲಾ ಹೇಳಿಕೊಂಡು ನಗುತ್ತಿದ್ದರು.

ತರುವಾಯ ಮತ್ತೊಂದು ದೇಶದ ರಾಜಕುಮಾರ ತಿಮಿರ ದ್ವೀಪಕ್ಕೆ ಹೋದ. ಆತನಿಗೂ ಸೋಲು ಸಂಭವಿಸಿತು. ಬಲಗೈ ಕಿರು





ಬೆರಳನ್ನು ಮಾತ್ರ ಕತ್ತರಿಸಿ ವಜ್ರಕಾಯ ಆತನನ್ನು ಪ್ರಾಣಸಹಿತ ಬಿಟ್ಟ.

ಹತ್ತು ಹದಿನೈದು ದಿನ ಸಾಗಿದುವು. ಅನೇಕ ದೇಶಗಳ ರಾಜಕುಮಾರರಿಗೆ ವಜ್ರಕಾಯನಿಂದ ಇದೇ ರೀತಿ ಶಾಸ್ತಿ ಆಯಿತು. ಯಾವ ರಾಜಕುಮಾರನ ಹಸ್ತ ನೋಡಿದರೂ ಐದು ಬೆರಳುಗಳಿಗೆ ಬದಲಾಗಿ ನಾಲ್ಕು ಬೆರಳುಗಳಿವೆ. ಅವರ ಸ್ಥಿತಿ ತುಂಬಾ ಶೋಚನೀಯವಾಗಿದೆ.

ಈ ರೀತಿ ಪರಿಸ್ಥಿತಿಯುಂಟಾಗಲು ನಿತ್ಯಾನಂದ ಹೆದರಿದ. ರಾಜಕುಮಾರಿ ಭಾಸುರಾಂಗಿ ಸಹ ಸ್ವಲ್ಪ ಬೆದರಿದಳು. ಆಗಾಗಲೇ ನೂರಾರು ಜನ ರಾಜಕುಮಾರರ ಕಿರು ಬೆರಳುಗಳು ವಜ್ರಕಾಯನ ಕತ್ತಿಗೆ ಬಲಿಯಾಗಿತ್ತು. ಬೇರೇನು ಉಪಾಯ ಎಂದು ಎಲ್ಲರೂ ಯೋಚಿಸುತ್ತಿರುವಾಗ ಎಲ್ಲಿಂದಲೋ ಒಬ್ಬ ಯುವಕನು ರಾಜನ ದರ್ಶನಕ್ಕಾಗಿ ಬಂದ.

"ಪ್ರಭೂ, ನಾನು ರಾಜಕುಮಾರನಲ್ಲ ಒಬ್ಬ ಬಡ ಒಕ್ಕಲಿಗನ ಮಗ. ಒಂದು ವೇಳೆ ನಾನು ವಜ್ರಕಾಯನನ್ನು ಗೆದ್ದರೆ ನಿಮ್ಮ ಮಗಳನ್ನು ನನಗೆ ಕೊಟ್ಟು ವಿವಾಹ ಮಾಡುವಿರಾ?" ಎಂದು ಕೇಳಿದ.

ರಾಜನು ಮಂತ್ರಿ ಮತ್ತು ಮಗಳ ಕಡೆ ಒಂದು ಸಾರಿ ದೃಷ್ಟಿ ಬೀರಿದ. "ಸರಿ" ಎಂದು ಅವರು ತಲೆಯಾಡಿಸಿದರು. ಕೂಡಲೇ "ವಜ್ರಕಾಯನನ್ನು ಗೆದ್ದವನು ಯಾರೇ ಆಗಲಿ ಜಗದೇಕವೀರನೇ ಆಗುವನು. ಅಂತಹವನಿಗೆ




ನನ್ನ ಮಗಳನ್ನು ತಪ್ಪದೆ ಕೊಟ್ಟು ವಿವಾಹ ಮಾಡುವೆನು" ಎಂದ ರಾಜ.

ಆ ಯುವಕ ರಾಜನ ಅಪ್ಪಣೆ ಪಡೆದು ಹೊರಟುಹೋದ. ವಜ್ರಕಾಯನಿಂದ ಸೋತ ಪ್ರತಿಯೊಬ್ಬರ ಬಲಗೈಯಲ್ಲಿ ನಾಲ್ಕೇ ನಾಲ್ಕು ಬೆರಳುಗಳಿರುವ ವಿಷಯ ಪ್ರತಿಯೊಬ್ಬರಿಗೂ ಗೊತ್ತಿದೆ. ಯಾರಾದರೂ ಒಂದು ಸಾರಿ ಸಮುದ್ರವನ್ನು ದಾಟಿ ಆ ದ್ವೀಪದಿಂದ ಐದು ಬೆರಳುಗಳ ಸಹಿತವಾಗಿ ಬಲಗೈಯಿಂದ ಹಿಂತಿರುಗಿದನೆಂದರೆ ಆತನು ವಜ್ರಕಾಯನನ್ನು ಸೋಲಿಸಿದನೆಂತಲೇ ತಿಳಿದಿದ್ದರು ನಿತ್ಯಾನಂದ ಮತ್ತು ಆತನ ಪ್ರಜೆಗಳು.

ಈ ವಿಷಯವನ್ನು ಚೆನ್ನಾಗಿ ಅರಿತಿದ್ದ ಆ ಯುವಕ ಹುಲ್ಲುಕೊಯ್ಯುವ ಕುಡುಗೋಲು

ಹೊರತು ಮತ್ತೆ ಯಾವೊಂದು ಆಯುಧವನ್ನು ಹಿಡಿಯಲು ಅರ್ಹನಲ್ಲದಿದ್ದರೂ ಸಹ ಧೈರ್ಯ ವಾಗಿ ವಜ್ರಕಾಯನ ಹತ್ತಿರ ಯುದ್ಧಮಾಡಲು ಹೊರಟ. ಸಾವಿರಾರು ಪ್ರಜೆಗಳೂ, ರಾಜನೂ ಆತನನ್ನು ಬೀಳ್ಕೊಟ್ಟರು.

ಆ ಯುವಕ ತಿಮಿರ ದ್ವೀಪದಲ್ಲಿ ಕಾಲಿಟ್ಟ ಕೂಡಲೇ ವಜ್ರಕಾಯನು ತಳತಳನೆ ಹೊಳೆ ಯುವ ಖಡ್ಗವನ್ನು ಝಳಪಿಸುತ್ತಾ ಮುಂದೆ ಬಂದ.

"ಎಷ್ಟು ಜನಕ್ಕೆ ಬೆರಳು ಕತ್ತರಿಸಿ ಕಳು ಹಿಸಿದರೂ ಇನ್ನೂ ಬಂದು ತೊಂದರೆ ಕೊಡು ತ್ತಿದ್ದಾರೆ. ಇನ್ನುಮುಂದೆ ಅವರನ್ನು ಕೊಂದೇ ಬಿಡುತ್ತೇನೆ! ಪೀಡೆ ತೊಲಗುತ್ತೆ" ಎಂದು ಹೂಂಕರಿಸಿದ.

ಅದಕ್ಕೆ ಆ ಯುವಕ ವಿನಯವಾಗಿ ಹೀಗೆಂದ: "ಮಹಾಪ್ರಭೂ, ನಾನು ನಿಮ್ಮ ಮೇಲೆ ಯುದ್ಧ ಮಾಡದೆಯೇ ಸೋಲನ್ನು ಒಪ್ಪಿಕೊಳ್ಳುವೆನು. ಈ ಕಿರುಬೆರಳನ್ನು ಕತ್ತ ರಿಸಿಬಿಟ್ಟರೆ ನನ್ನದಾರಿ ನಾನು ಹಿಡಿಯುವೆನು. ಮತ್ತೇನೂ ಬೇಡ"

ವಜ್ರಕಾಯನಿಗೆ ಈ ಮಾತುಗಳು ತುಂಬಾ ಆಶ್ಚರ್ಯವನ್ನುಂಟು ಮಾಡಿತು. ಆದರೂ ಯಾವೊಂದು ಕಷ್ಟವಿಲ್ಲದೆ ಕೆಲಸ ಮುಗಿಸ ಬಹುದೆಂದು "ಹಾಗೇ ಆಗಲಿ" ಎಂದು ಆ ಯುವಕನ ಬಲಗೈ ಹಿಡಿದುಕೊಂಡು ಕಿರು ಬೆರಳನ್ನು ಕತ್ತರಿಸಿ ಹೋಗೆಂದ.

ಆ ಯುವಕ ಚಿಂತೆಪಡುವ ಬದಲಾಗಿ, ಸಂತೋಷದಿಂದ ಹಡಗು ಹತ್ತಿ ತೀರವನ್ನು ಸೇರಿದ. ಹಡಗು ದಡವನ್ನು ಸೇರುವ ಮೊದಲೇ ಬಲಗೈಯಲ್ಲಿ ಒಂದು ದೊಡ್ಡ ಖಡ್ಗವನ್ನು ಹಿಡಿದು ಝಳಪಿಸುತ್ತಾ "ವಜ್ರಕಾಯ ಸೋತುಹೋದ. ನೋಡಿ ನನ್ನ ಬೆರಳುಗಳನ್ನು!" ಎಂದು ಉಬ್ಬಿನಿಂದ ತನ್ನ ಐದು ಬೆರಳು ಗಳನ್ನೂ ತೋರಿಸಿದ.

ಅಲ್ಲಿ ನೆರೆದಿದ್ದ ಜನರೆಲ್ಲಾ "ಜಗದೇಕವೀರ ನಿಗೆ ಜಯವಾಗಲಿ" ಎಂದು ಜಯಕಾರಗಳನ್ನು ಮಾಡಿದರು. ಭಾಸುರಾಂಗಿ ಆತನ ಕೊರಳಿಗೆ ಹೂಮಾಲೆ ಹಾಕಿದಳು. ಆದರೆ ಆ ಯುವಕನ ಕೈಗೆ ಮೊದಲು ಆರು ಬೆರಳುಗಳಿದ್ದವೆಂದು ಯಾರೂ ಕಂಡುಹಿಡಿಯಲಿಲ್ಲ.






# ಮೂರು ನಿಂಬೆಗಳು

ಒಬ್ಬರಾಜ. ಆತನಿಗೆ ಒಬ್ಬಳೇ ಒಬ್ಬ ಮಗಳು ಆಕೆ ಸುರಸುಂದರಿ. ಆಕೆ ಬೆಳೆದು ದೊಡ್ಡವಳಾದಂತೆ ಆಕೆಯ ಸೌಂದರ್ಯವೂ ಹೆಚ್ಚುತ್ತಿತ್ತು.

ಆ ಸೌಂದರ್ಯರಾಶಿಯನ್ನು ಕಂಡು ಸಂಬಂಧಿಗಳಿಗೆ ಆನಂದವಾಗುವ ಪ್ರತಿಯಾಗಿ ಚಿಂತೆ ಹೆಚ್ಚಾಗುತಲಿತ್ತು. ಆ ರಾಜುಕಮಾರಿ ಸ್ತ್ರೀ ಸಹಜನಾದ ಲಕ್ಷಣಗಳನ್ನು ಪರಿಪಾಲಿಸುತ್ತಿರಲಿಲ್ಲ. ಇದೇ ಅವರ ಚಿಂತೆಗೆ ಕಾರಣ. ತಂದೆಯ ತರುವಾಯ ಆ ರಾಜ್ಯದ ರಾಣಿಯಾಗುವ ಸಂಭವವಿದ್ದರೂ ಸಹ ರಾಜಕಾರಣದ ವಿಷಯ ಎಳ್ಳಷ್ಟೂ ಅರಿತುಕೊಳ್ಳಲಿಲ್ಲ.

ನಡೆಯುವುದನ್ನು ಅರಿತಾಗಲಿಂದ ಆಕೆಗೆ ಓಡುವುದು ಒಂದೇ ಒಂದು ಹವ್ಯಾಸ— ಮಾನವನೇ ಆಗಲೀ, ಪ್ರಾಣಿಯೇ ಆಗಲೀ, ಪಕ್ಷಿಯೇ ಆಗಲಿ ಯಾವುದೂ ತನಗಿಂತ ವೇಗವಾಗಿ ಓಡಕೂಡದು. ಇದು ಆಕೆಯ ಅಭಿಲಾಷೆ.

ಯಾವುದಾದರೊಂದು ಕುದುರೆ ಓಡುವುದು ಆಕೆಯ ಕಣ್ಣಿಗೆ ಗೋಚರವಾಯಿತೆಂದರೆ, ರಾಜಕುಮಾರಿ ಅದನ್ನು ಸೋಲಿಸುವತನಕ ಸುಮ್ಮನಿರುತ್ತಿರಲಿಲ್ಲ. ಅರಣ್ಯಕ್ಕೆ ಹೋದಳೆಂದು ಭಾವಿಸಿ, ಅಲ್ಲಿನ ಮೃಗಗಳೊಂದಿಗೆ ಓಡುವಳು. ಉದ್ಯಾನವನಕ್ಕೆ ಹೋದರೆ ಹುಲ್ಲೆಗಳಿಗಿಂತಲೂ ವೇಗವಾಗಿ ಓಡುವಳು. ಎಷ್ಟು ದೂರ ಓಡಿದರೂ, ಆಕೆಗೆ ಆಯಾಸವಾಗುತ್ತಿರಲಿಲ್ಲ.

"ವಾಯುದೇವನ ಹೊರತು ಮತ್ತೆ ಯಾರೂ ಈಕೆಗಿಂತಲೂ ವೇಗವಾಗಿ ಓಡಲಾರರು. ಈಕೆ ಮಾರುತನ ವರದಿಂದ ಜನಿಸಿರಬೇಕು" ಎಂದು ಜನ ಹೇಳಿಕೊಳ್ಳುತ್ತಿದ್ದರು. ಆಕೆಗೆ 'ಮಾರುತಿ' ಎಂಬ ಹೆಸರನ್ನೂ ಸಹಾ ಇಟ್ಟುಬಿಟ್ಟರು.

ಈ ಹವ್ಯಾಸದಿಂದ ಆಕೆಯನ್ನು ತಪ್ಪಿಸಲು ಆಕೆಯ ಸಖಿಯರೆಲ್ಲರೂ ಪ್ರಯತ್ನಪಟ್ಟು ವಿಫಲರಾದರು.

ಮಂತ್ರಿ ಮತ್ತು ರಾಜಗುರು ಸಹ ಹೇಳಿ ನೋಡಿದರು. ರಾಜ ಮುದುಕನಾಗುತ್ತಿದ್ದಾನೆ. ಎಂದಾದರೂ ಮಾರುತಿಗೆ ಕಿರೀಟಧಾರಣೆಯಾಗಬೇಕು. ಇನ್ನೂ ಅವಳು ಸ.ಧಾರಿಸದಿದ್ದರೆ ಹೇಗೆ?

ಪಿ. ಗಿರಿಜಾಬಾಯಿ, ಪಣಂಬೂರು



ಪ್ರಜಾನುರಾಗವಿಲ್ಲದಿದ್ದರೆ ರಾಜ್ಯವಾಳುವುದು ಕಷ್ಟ. ಮಾರುತಿ ಕುದುರೆಗಳೊಂದಿಗೂ, ಜಿಂಕೆಗಳೊಂದಿಗೂ ಓಡಿ ಗೆಲ್ಲುವಳೆಂದು ಪ್ರಜೆಗಳು ಗೌರವಿಸಲಾರರು. ರಾಜ್ಯಭಾರ ವಹಿಸುವವರು ಯುಕ್ತಿ, ತಂತ್ರಗಳಲ್ಲಿ ನೈಪುಣ್ಯತೆ ಪಡೆದಿರಬೇಕು. ಮಾರುತಿ ಇನ್ನಾದರೂ ತನ್ನ ದೃಷ್ಟಿಯನ್ನು ರಾಜೋಚಿತವಾದ ಮರ್ಯಾದೆಗಳ ಕಡೆ ಗಮನ ಕೊಡಬೇಕು.

ಮಾರುತಿಗೆ ಯುಕ್ತವಯಸ್ಸು ಪ್ರಾಪ್ತವಾಯಿತು. ಇಂದೋ ನಾಳೆಯೋ ಆಕೆಗೆ ವಿವಾಹವಾಗಲೇಬೇಕು. ಪಟ್ಟಾಭಿಷೇಕವನ್ನು ಮುಂದಕ್ಕೆ ತಳ್ಳಿದರೂ, ವಿವಾಹವನ್ನು ಬಹಳ ಕಾಲ ಮುಂದಕ್ಕೆ ಹಾಕುವಂತಿಲ್ಲ. ನೆರೆಹೊರೆಯ ರಾಜಕುಮಾರರಲ್ಲಿ ಯಾರಾದರೂ ಅರ್ಹನಾದವನನ್ನು ಆರಿಸಿ ಮಾರುತಿ ವರಿಸಿದರೆ, ಮಿಕ್ಕೆಲ್ಲ ವಿಷಯಗಳನ್ನೂ ರಾಜಗುರು ಮತ್ತು ಮಂತ್ರಿ ನೋಡಿಕೊಳ್ಳುವರು. ಆದರೊಂದು ವಿಷಯ. ಮಾರುತಿ ನಡತೆ ಬದಲಾಯಿಸದಿದ್ದರೆ ಉನ್ನತ ವಂಶಕ್ಕೆ ಸೇರಿದ ಯಾವ ರಾಜಕುಮಾರನೇ ಆಗಲೀ ಆಕೆಯನ್ನು ಮದುವೆಯಾಗಲಾರ.

ರಾಜಗುರು ಮತ್ತು ಮಂತ್ರಿ ಹೇಳಿದ ಮಾತುಗಳನ್ನು ಮಾರುತಿ ಸಾವಧಾನವಾಗಿ ಕೇಳಿದಳು.

ಆಕೆ ಹೀಗೆ ಹೇಳಿದಳು: "ಸರಿ. ನನ್ನ ವಿವಾಹಕ್ಕೆ ಏರ್ಪಾಡು ಮಾಡಿ. ನನಗೆ ನಿಮ್ಮ ರಾಜಕುಮಾರರು ಯಾರೂ ಬೇಕಾಗಿಲ್ಲ. ಓಡುವುದರಲ್ಲಿ ನನ್ನನ್ನು ಯಾರು ಸೋಲಿಸುವರೋ ಆತನನ್ನು ಮಾತ್ರ ನಾನು ವಿವಾಹವಾಗುವೆನು. ಮತ್ತೆ ಯಾರೂ ನನ್ನನ್ನು ವಿವಾಹವಾಗಲು ಅರ್ಹರಲ್ಲ."

ಮಂತ್ರಿ ದಿಗ್ಮೂಢನಾದ. ರಾಜಗುರುವಿನ ಬಾಯಿಯಲ್ಲಿ ಮಾತೇ ಹೊರಡದಂತಾಯಿತು.

"ಸರಿ, ತಾಯಿ, ನೀವು ಹೇಳಿದಂತೆಯೇ ಮಾಡೋಣ. ಎಲ್ಲ ದೇಶಗಳಿಗೂ ಸಮಾಚಾರ ಕಳುಹಿಸುತ್ತೇವೆ" ಎಂದ ಮಂತ್ರಿ.

"ಆದರೊಂದು ನಿಯಮವಿದೆ. ನಾನು ಗೌರವ ವಂಶದ ರಾಜಕುಮಾರಿ. ನನ್ನನ್ನು ಮದುವೆಯಾಗುವ ಆಶೆಯಿಂದ ಯಾರೆಂದರೆ ಅವರು ನನ್ನೊಂದಿಗೆ ಸ್ಪರ್ಧೆಗೆ ನಿಲ್ಲಬಹುದು. ಆದುದರಿಂದ ನನ್ನೊಂದಿಗೆ ಓಡಿ ಸೋತುಹೋದ

ವರ ಶಿರಚ್ಛೇದ ಮಾಡಲಾಗುವುದು ಎಂದು ಎಲ್ಲರಿಗೂ ತಿಳಿಸಿ" ಎಂದು ರಾಜಕುಮಾರಿ ಹೇಳಿದಳು.

"ಆಗಬಹುದು ತಾಯಿ" ಎಂದ ಮಂತ್ರಿ.

೨



ಮಾರುತಿಯ ವಿವಾಹದ ಷರತ್ತನ್ನು ಕೇಳಿ ಪ್ರತಿಯೊಬ್ಬರೂ ಆಶ್ಚರ್ಯಪಟ್ಟರು. ಓಟದ ಪಂದ್ಯದ ಮುಖಾಂತರ ಪತಿಯನ್ನು ಆರಿಸಿ ಕೊಂಡ ರಾಜಕುಮಾರಿಯ ಸಂಗತಿ ಯಾರೂ ಎಂದೂ ಕೇಳಿರಲಿಲ್ಲ! ಇಂತಹ ಕಥೆ ಯಾವ ಪುರಾಣದಲ್ಲೂ ಇಲ್ಲ!!

ಸೀತಾಸ್ವಯಂವರದಲ್ಲಿ ಮದುವೆಯಾಗಲು ಬಂದವರಲ್ಲಿ ಒಬ್ಬರಿಗೊಬ್ಬರು ಸ್ಪರ್ಧಿಸಿದರೇ ಹೊರತು ಯಾರೂ ಮದುಮಗಳೊಂದಿಗೆ ಸ್ಪರ್ಧೆ ಹೂಡಲಿಲ್ಲ.

ಮಾರುತಿಯ ಸೌಂದರ್ಯವನ್ನು ಕೇಳಿದ ವರು ಆಕೆಯ ಸಲುವಾಗಿ ಶಿರಚ್ಛೇದನ ಮಾಡಿಸಿಕೊಂಡರೂ ಪರವಾಗಿಲ್ಲವೆಂದು ಆಕೆ ಯೊಂದಿಗೆ ಸ್ಪರ್ಧಿಸಲು ಬಂದರು.

ಕೆಲವರು ರಾಜ್ಯಕಾಂಕ್ಷೆಯಿಂದ ಈಸ್ಪರ್ಧೆಗೆ ಬಂದರು. ಆಕೆಯ ಓಟದ ವಿಷಯವನ್ನು ಕೇಳಿದ ಕೆಲವರು "ಹೆಣ್ಣುಮಗಳೊಂದಿಗೆ ಓಡಲಾರೆವೇ?"ಎಂದು ಜಂಭದಿಂದ ಬಂದರು. ವಿದ್ಯೆಯಲ್ಲಿ ಹೆಸರು ಗಳಿಸಿದ ಅನೇಕರು ಆಕೆ ಯನ್ನು ಜಯಿಸಬೇಕೆಂಬ ಅಹಂಕಾರದಿಂದ ಬಂದರು. ಮತ್ತೆ ಕೆಲವರು ಈ ವಿಷಯ ತಿಳಿದ ಕೂಡಲೇ ಓಡುವುದನ್ನು ಅಭ್ಯಾಸ ಮಾಡಲು ಪ್ರಾರಂಭಿಸಿದರು.

ಮಾರುತಿ ಸ್ವಯಂವರದ ಪ್ರಕಟನೆಯಾದ ಮಾರನೆಯ ದಿವಸದಿಂದ ವಿವಿಧ ದೇಶಗಳಿಂದ ಅಭ್ಯರ್ಥಿಗಳು ಬರಲು ಪ್ರಾರಂಭಿಸಿದರು. ಅವರಲ್ಲಿ ವಿಖ್ಯಾತರಿದ್ದಾರೆ, ಪ್ರತಿಭಾವಂತ ರಿದ್ದಾರೆ, ಉನ್ನತ ವಂಶಕ್ಕೆ ಸೇರಿದವರಿದ್ದಾರೆ, ಸುಂದರರಿದ್ದಾರೆ, ಆದರೆ ಒಬ್ಬರೂ ಓಟದಲ್ಲಿ ಆಕೆಯನ್ನು ಮೀರಿಸುವವರಿಲ್ಲ.

ಬೆಳಿಗ್ಗೆಯಿಂದ ಸಂಜೆಯವರೆವಿಗೂ ಮಾರುತಿ ಎಷ್ಟುಜನರೊಂದಿಗಾದರೂ ಓಡಲು ಸಿದ್ಧಳಿರುವಳು. ರಾಜಭವನದ ಮುಂದೆ ವಿಶಾಲವಾದ ಸ್ಥಳವನ್ನು ಈ ಸ್ಪರ್ಧೆಗೆ ಮೀಸ ಲಾಗಿಟ್ಟರು.



ದಿಗೆ ಓಡಲು ಸಾಹಸ ಮಾಡಿದವರದೇ ತಪ್ಪೆಂತಲೂ ಕೆಲವರು ಹೇಳಿದರು. ಈರೀತಿ ಸ್ಪರ್ಧೆ ಮುಂದು ವರೆವರೆ ಸುತ್ತು ಮುತ್ತ ಲಿರುವ ಯುವಕರೆಲ್ಲಾ ನಿರ್ಮೂಲವಾಗುವರೆಂದರು ಹಲವು ಜನ. ನೋಡಿ ಬೇಕಾದರೆ ಮಾರುತಿಗೆ ವಿವಾಹವೇ ಆಗುವುದಿಲ್ಲ ಎಂದು ಮತ್ತೆ ಕೆಲವರು ಹೇಳಿದರು.

ಮಾರುತಿಯನ್ನು ಮದುವೆಯಾಗಲು ಬಂದವರಲ್ಲಿ ಸೋತವರು ಸಾಯುತ್ತಿದ್ದಾರೆ. ಹೊಸಬರು ಬರುತ್ತಲೇ ಇದ್ದಾರೆ.

ಈ ರೀತಿ ಆ ದೇಶಕ್ಕೆ ಬಂದವರಲ್ಲಿ ಕುಮಾರನೆಂಬ ಒಬ್ಬ ಯುವಕನಿದ್ದ. ಆತನೇನೋ ಒಬ್ಬ ರಾಜಕುಮಾರ; ಆದರೆ ಆತನು ಚಿಕ್ಕಂದಿನಲ್ಲೇ ತಂದೆತಾಯಿಗಳನ್ನು ಕಳೆದುಕೊಂಡು ರಾಜ್ಯಭ್ರಷ್ಟನಾಗಿ, ದೇಶಾಂತರವಾಸ ಮಾಡುತ್ತಿದ್ದ.

ಕುಮಾರನು ಈ ದೇಶಕ್ಕೆ ಬಂದು ಇಲ್ಲಿ ನಡೆಯುವ ಭೀಕರ ಸ್ವಯಂವರದ ಸುದ್ದಿ ಕೇಳಿದ. ಎಲ್ಲರಂತೆ ಆತನೂ ಸ್ಪರ್ಧೆ ನಡೆಯುವ ಸ್ಥಳಕ್ಕೆ ಬಂದ.

ಅಂದು ಪ್ರಥಮ ನರಪಶುವಿನೊಂದಿಗೆ ಓಡಲು ಸಿದ್ಧವಾಗಿ ನಿಂತಿದ್ದಳು ಮಾರುತಿ. ಆಕೆ ಕುಮಾರನ ಕಣ್ಣಿಗೆಬಿದ್ದಮರುಕ್ಷಣವೇ ಅತನಿಗೆ ಮಿಕ್ಕ ಪ್ರಪಂಚವೆಲ್ಲಾ ಮರೆತುಹೋಯಿತು. ಆಕೆಯ ಹೊರತು ಆತನಿಗೆ ಮತ್ತೇನೂ ಕಾಣಿಸದಾಯಿತು. ಆಕೆಯನ್ನು ನೋಡುತ್ತಿದ್ದಹಾಗೆಯೇ ಆಕೆ ಒಬ್ಬನೊಂದಿಗೆ ಓಡಿ ಗೆದ್ದಳು. ಆ

ಸುತ್ತಲೂ ಪ್ರೇಕ್ಷಕರು ನಿಲ್ಲಲು ಏರ್ಪಾಟು ಮಾಡಿದರು. ಸ್ಪರ್ಧಿಗಳು ಓಡುವಸ್ಥಳದ ಒಂದು ಪಕ್ಕಕ್ಕೆ ವಧ್ಯಶಿಲೆಯನ್ನು ಏರ್ಪಡಿಸಿರುವರು. ಸೋತುಹೋದ ಮರುಕ್ಷಣ ಸ್ಪರ್ಧಿಗಳು ವಧ್ಯಶಿಲೆಯ ಹತ್ತಿರಹೋಗಿ ಶಿಕ್ಷೆ ಪಡೆಯಲೇಬೇಕು.

ಮೊದಲನೆಯ ದಿನ ಈ ವಧ್ಯಶಿಲೆಯಿಂದ ಹನ್ನೆರಡು ತಲೆಗಳು ಕೆಳಗುರುಳಿದುವು. ಪ್ರತಿ ಶಿಕ್ಷೆಯಾದಾಗಲೂ ಪ್ರೇಕ್ಷಕರು ಹಾಹಾಕಾರ ಮಾಡಿದರು.

ಮಾರುತಿಯನ್ನು ಕುರಿತು ಅನೇಕರು ಅನೇಕ ರೀತಿ ಮಾತಾಡಿಕೊಂಡರು. ಆಕೆ ಪಾಷಾಣ ಹೃದಯಳು ಎಂದರು ಕೆಲವರು. ಆಕೆಯದೇನೂ ತಪ್ಪಿಲ್ಲವೆಂತಲೂ ಆಕೆಯೊಂ

ಅಭಾಗ್ಯನ ತಲೆ ಕತ್ತರಿಸಿದರು. ಆದರೆ ಕುಮಾರನ ಕಣ್ಣಿಗೆ ಮಾರುತಿ ಹೊರತು ಆಕೆಯೊಂದಿಗೆ ಸ್ಪರ್ಧೆಹೂಡಿ ಸೋತು ಹೋದ ಅಭಾಗ್ಯನಾಗಲೀ, ಅವನ ಶಿರಚ್ಛೇದನವಾಗಲೀ ಕಾಣಿಸದಾಯಿತು. ಪ್ರಜೆಗಳ ಹಾಹಾಕಾರವೂ ಕೇಳಿಸದಾಯಿತು. ಅಂದು ಸ್ಪರ್ಧೆಗಳು ಮುಗಿಯುವವರೆವಿಗೂ ಅಲ್ಲೇ ನಿಂತಿದ್ದು ಮಾರುತಿಯನ್ನು ನೋಡುತ್ತಿದ್ದ!

ಪ್ರಜೆಗಳು ತಮ್ಮ ತಮ್ಮ ಮನೆಗಳಿಗೆ ಹೊರಟರು. ಕುಮಾರನೂ ಸಹ ಅಲ್ಲಿಂದ ಕದಲಿದ. ಎತ್ತಕಡೆ ಹೋಗುತ್ತಿರುವನೋ ಆತನಿಗೇ ತಿಳಿಯದು. ನೆಟ್ಟಗೆ ಊರಾಚೆ ಹೋದ. ನದಿಯ ದಡದಲ್ಲಿ ಒಂದು ಅಡವಿ. ಆ ಅಡವಿಯಲ್ಲಿ ಒಂದು ಕಾಲುದಾರಿ.

ಆ ಕಾಲುದಾರಿಯಲ್ಲಿ ನಡೆದು ಒಂದು ಪಾಳುಬಿದ್ದ ದೇವಾಲಯವನ್ನು ಸೇರಿಕೊಂಡ ಒಳಗೆ ಪ್ರವೇಶಿಸಿದ. ಅದರಲ್ಲಿ ಪಾರ್ವತಿಯ ಮೂರ್ತಿ ಇತ್ತು.

ಆ ದೇವಾಲಯಕ್ಕೆ ಜನರು ಯಾರೂ ಹೋಗುತ್ತಿರಲಿಲ್ಲ. ಆಲಯದ ನೆಲಕ್ಕೆ ಹಾಸಿದ್ದ ಚಪ್ಪಡಿಗಳ ಮಧ್ಯೆಮಧ್ಯೆ ಯಾವುದಾವುವೋ ಗಿಡಗಂಟೆಗಳು ಬೆಳೆದಿದ್ದುವು. ಕಲ್ಲುಗಳೆಲ್ಲಾ ಮಲಿನವಾಗಿದ್ದವು. ಅಲ್ಲಿ ಹಲ್ಲಿ, ಅಳಿಲು, ಗುಬ್ಬಚ್ಚಿ ಮುಂತಾದುವು ತಾವೇತಾವಾಗಿ ಸಂಚರಿಸುತ್ತಿದ್ದವು.

ಪಾರ್ವತಿಯ ವಿಗ್ರಹವನ್ನು ಕಂಡಕೂಡಲೇ ಕುಮಾರನ ಹೃದಯದಲ್ಲಿ ಉಕ್ಕುತ್ತಿದ್ದ ಭಾವ



ಗಳೆಲ್ಲ ಹೊರಹೊಮ್ಮಿದವು. ಆತ ಆ ವಿಗ್ರಹದ ಕಾಲುಗಳನ್ನು ಹಿಡಿದುಕೊಂಡು ಈರೀತಿಯಾಗಿ ಕಾತರ ಸ್ವರದಿಂದ ಹೇಳಲಾರಂಭಿಸಿದ:

"ತಾಯಿ, ಪಾರ್ವತಿ. ನೀನು ನಮ್ಮ ಕುಲದೇವತೆ. ನಾನೆಷ್ಟೋ ಕಷ್ಟಗಳಲ್ಲಿ ಸಿಲುಕಿದ್ದೆ. ಆದರೆ ಎಂದೂ ನಿನ್ನನ್ನು ಏನೂ ಕೋರಿರಲಿಲ್ಲ. ಈಗ ನನ್ನದೊಂದೇ ಒಂದು ಕೋರಿಕೆಯನ್ನು ನೆರವೇರಿಸು. ಹೇಗಾದರೂ ಮಾರುತಿಯನ್ನು ನನ್ನ ಪತ್ನಿಯನ್ನಾಗಿ ಮಾಡು. ನನಗೆ ರಾಜ್ಯ ಬೇಡ. ಭೋಗಭಾಗ್ಯಗಳು ಬೇಡ. ನನಗೆ ಮಾರುತಿ ಹೊರತು ಮತ್ತೇನೂ ಅವಶ್ಯಕತೆಯಿಲ್ಲ. ನಿನ್ನ ಪಾದದಾಣೆಗೂ ನನ್ನ ಮಾತು ಸತ್ಯ ತಾಯಿ, ಮಾರುತಿ ಆಮಾಯಕಳು. ಆಕೆಗೆ



೩

ಮೂರು ಹಗಲು, ಮೂರು ರಾತ್ರಿ ನಿದ್ರಾಹಾರಗಳಿಲ್ಲದೆ ಕುಮಾರನು ಅನೇಕ ರೀತಿಯಾಗಿ ಪಾರ್ವತಿಯ ಪಾದಗಳನ್ನು ಆಶ್ರಯಿಸಿದ. ಮೂರನೆಯ ರಾತ್ರಿ ಮೂರು ಜಾವ ಕಳೆಯಿತು.

ದೂರದಲ್ಲಿ ಕೋಳಿ ಕೂಗಿತು. ಅಂಧಕಾರವಾಗಿದ್ದ ಶಿಥಿಲ ದೇವಾಲಯವು ತಟ್ಟನೆ ಪ್ರಕಾಶಮಾನವಾಯಿತು. ಕುಮಾರನು ತಲೆಎತ್ತಿ ನೋಡಿದ. ಮಿಂಚನ್ನೂ ಮೀರಿಸಿದ ಬೆಳಕು ಹೊರತು ಮತ್ತೇನೂ ಆತನಿಗೆ ಕಾಣಿಸಲಿಲ್ಲ. ಈ ಮಾತುಗಳು ಮಾತ್ರ ಕೇಳಿಸಿದವು:

"ಮಗೂ, ಚಿಂತಿಸಬೇಡ. ನಿನ್ನ ಅಭೀಷ್ಟವನ್ನು ನೆರವೇರಿಸುವೆನು. ಶಕ್ತಿಯಿಂದ ನೀನು ಮಾರುತಿಯನ್ನು ಜಯಿಸಲಾರೆ. ಯುಕ್ತಿಯಿಂದ ಜಯಿಸು. ನಿನಗೆ ಮೂರು ಚಿನ್ನದ ನಿಂಬೆ ಹಣ್ಣುಗಳನ್ನು ಕೊಡುತ್ತೇನೆ. ನೀನು ಮಾರುತಿಯೊಂದಿಗೆ ಓಡಲು ಸ್ಪರ್ಧೆಗೆ ನಿಂತಾಗ ಆಕೆ ನಿನ್ನನ್ನು ದಾಟಿಹೋಗುವ ಸಮಯದಲ್ಲಿ ಒಂದು ಹಣ್ಣನ್ನು ಬಿರುಸಾಗಿ ಹಿಂದಕ್ಕೆ ಎಸೆ. ಅಗತ್ಯಬಿದ್ದಲ್ಲಿ ಮೂರು ಹಣ್ಣುಗಳನ್ನೂ ಉಪಯೋಗಿಸಿ ನಿನ್ನ ಕೆಲಸ ಸಾಗಿಸು."

ಕ್ಷಣಮಾತ್ರದಲ್ಲಿ ಆ ಕಾಂತಿಯೂ ಮಾಯವಾಯಿತು. ಆ ಸಮಯದಲ್ಲಿ ಯಾವುದೋ ಶೀತಲ ಕೈ ತಾಕಿದಂತಾಯಿತು. ಆ ಸ್ಪರ್ಶದಿಂದ ಕುಮಾರನಿಗೆ ಆವೇದನೆ, ಹಸಿವು ಬಾಯಾರಿಕೆ

ಪ್ರೇಮವೆಂದರೇನೋ ತಿಳಿಯದು. ತಿಳಿದರೆ ಆಕೆ ಪತಿಗಾಗಿ ಈ ಸ್ಪರ್ಧೆ ಏರ್ಪಡಿಸುತ್ತಿರಲಿಲ್ಲ. ಆಕೆಯ ಹೃದಯದಲ್ಲಿ ಪ್ರೇಮಜ್ವಾಲೆಯನ್ನು ಉರಿಸು.

"ತಾಯೀ, ನಿನ್ನ ಹೊರತು ನನಗೆ ಬೇರೆ ಯಾರಿದ್ದಾರೆ ದಿಕ್ಕು. ನೀನು ನನಗೆ ಮಾರುತಿಯನ್ನು ಕೊಡಿಸದ ಪಕ್ಷಕ್ಕೆ ನನ್ನ ಜನ್ಮ ವೃಥಾ ಆಗುವುದು. ಅಷ್ಟರವರೆವಿಗೂ ನಿನ್ನ ಪಾದಗಳನ್ನು ಬಿಟ್ಟು ಕದಲುವುದಿಲ್ಲ. ಸಾವು ತಪ್ಪುವುದಿಲ್ಲವಷ್ಟೆ. ಒಂದು ಕಡೆ ಪ್ರೇಮದಿಂದ ದಹಿಸಿಹೋಗುತ್ತಿರುವ ನಾನು ಬಹಳ ಕಾಲ ಬಾಳಲಾರೆ. ನಿನಗೆ ನನ್ನ ಮೇಲೆ ಅನುಗ್ರಹವುಂಟಾಗದ ಪಕ್ಷಕ್ಕೆ ನಿನ್ನಪಾದಗಳ ಹತ್ತಿರವೇ ಪ್ರಾಣ ಬಿಡುವೆನು."



ಗಳು ಮಾಯವಾದುವು. ಪಾರ್ವತಿ ದೇವಿಯ ಪಾದಗಳ ಮೇಲಿಂದ ಆತನು ತನ್ನ ಕೈಗಳನ್ನು ತೆಗೆದ.

ಆತನ ಮಡಿಲಲ್ಲಿ ಥಳಥಳನೆಂದು ಮೆರೆಯುವ ಮೂರು ನಿಂಬೆ ಹಣ್ಣುಗಳು ಇದ್ದವು. ಆತನು ಅವುಗಳನ್ನು ಕಣ್ಣಿಗೆ ಒತ್ತಿಕೊಂಡು, ದೇವಾಲಯದಿಂದ ಹೊರಬಿದ್ದು, ನದಿಯಲ್ಲಿ ಸ್ನಾನಮಾಡಿ, ಸ್ವಯಂವರಕ್ಕೆ ಸಿದ್ಧನಾಗಿ ಹೊರಟ.

ಆಗಲೇ ಬೆಳಗಾಗಿತ್ತು. ಜನ ಒಬ್ಬೊಬ್ಬರಾಗಿ ಬಂದು ಸೇರುತ್ತಿದ್ದರು. ಮಾರುತಿ ಸ್ಪರ್ಧೆಗಾರರಿಗಾಗಿ ಸಿದ್ಧವಾಗಿರುವಳು. ಆಕೆಯ ಹೃದಯ ಒಂದು ಶಿಲೆ. ಕುಮಾರನು ಆ ವಿಷಯ ತಿಳಿದೂ ಆಕೆಯನ್ನು ಪ್ರೇಮಿಸಿದ್ದಾನೆ. ಆ ಶಿಲೆಯನ್ನು ಕರಗಿಸಲು ಪಾರ್ವತೀದೇವಿ ಬೆಂಬಲವಿರುವುದೆಂದು ಆತನು ನಂಬಿದ್ದಾನೆ.

ಸ್ಪರ್ಧೆಗೆ ಏರ್ಪಾಟುಗಳೆಲ್ಲಾ ಪೂರ್ತಿಯಾದವು. ಒಬ್ಬರ ಪಕ್ಕದಲ್ಲೊಬ್ಬರು ನಿಂತುಕೊಂಡರು. ಓಡಲು ಸಂಕೇತ ಯಾವಾಗ ಬರುವುದೋ ಎಂದು ಇಬ್ಬರೂ ಕಾದಿರುವರು.

ಸೌಜ್ಞೆ ಕೊಟ್ಟರು. ಆ ಕ್ಷಣದಲ್ಲಿ ಕುಮಾರನು ಒಂದು ನಿಂಬೆ ಹಣ್ಣನ್ನು ತೆಗೆದು ಪಕ್ಕಕ್ಕೆ ಒಗೆದ. ಅದು ಎಳೆ ಬಿಸಿಲಿನಲ್ಲಿ ಮಿಲಮಿಲನೆ ಮೆರೆಯುತ್ತಾ ಅತಿ ವೇಗವಾಗಿ ಜನರ ಕಡೆಗೆ ಉರುಳುತ್ತಿತ್ತು.

ಮಾರುತಿಯ ಕಣ್ಣುಗಳು ಮಿಣುಗುಟ್ಟಿದವು. ಅತಿ ವೇಗವಾಗಿ ಉರುಳಿಕೊಂಡು ಹೋಗುತ್ತಿರುವ ಆ ನಿಂಬೆ ಹಣ್ಣು ತನಗೆ ಸವಾಲು ಹಾಕುತ್ತಿರುವಂತೆ ಭಾಸವಾಯಿತು. ಆ ಹಣ್ಣಿನ ಹಿಂದೆ ಓಡಿ, ಅದು ಜನರಮಧ್ಯೆ ಸೇರುವಮುನ್ನ ಅದನ್ನು ಹಿಡಿದು, ಕುಮಾರನ ಕಡೆ ನೋಡಿದಳು. ಆತನಾಗಲೇ ಹದಿನೈದು ಗಜ ದೂರ ಓಡಿಬಿಟ್ಟಿದ್ದಾನೆ.

ಮಾರುತಿಗೆ ಎಲ್ಲಿಂದಲೋ ನೂತನ ಶಕ್ತಿ ಬಂದಂತಾಯಿತು. ಆಕೆ ಶರವೇಗದಲ್ಲಿ ಆತನನ್ನು ಸಮೀಪಿಸಿದಳು; ಸೇರಿಕೊಂಡಳು. ಇನ್ನೊಂದು ಕ್ಷಣಕ್ಕೆ ತನ್ನನ್ನು ದಾಟಿಬಿಡುವಳೆಂದಾಗ ಕುಮಾರನು ಎರಡನೇ ನಿಂಬೆ ಹಣ್ಣನ್ನು ತೆಗೆದು ಆದಷ್ಟು ಜೋರಾಗಿ ಹಿಂದಕ್ಕೆ ಎಸೆದ. ಮಾರುತಿ ಅದರ ಕರೆಯನ್ನು ತೃಣೀಕರಿಸದಾದಳು. ಸ್ಪರ್ಧೆಯ ಮಾತನ್ನು ಮರೆತು

ಆಕೆ ಅದರ ಹಿಂದೆ ಓಡಿ ಅದು ನಿಲ್ಲುವಮುನ್ನ ಹಿಡಿದುಕೊಂಡಳು. ಈ ವೇಳೆಗೆ ಕುಮಾರ ಅರವತ್ತುಗಜ ದೂರ ಓಡಿಬಿಟ್ಟಿದ್ದಾನೆ.

ಮಾರುತಿಯ ಕಾಲುಗಳಿಗೆ ಯಾರೂ ಊಹಿಸಲಾರದ ಚೇತನ ವುಂಟಾಯಿತು. ಆಕೆ ಬಿರುಗಾಳಿಯಂತೆ ಕುಮಾರನ ಕಡೆ ಓಡಿದಳು. ಆತನು ಹತ್ತುಗಜ ಓಡುವಷ್ಟರಲ್ಲಿ ಆಕೆ ಆತನನ್ನು ಸಮೀಪಿಸಿದಳು. ಮತ್ತೊಂದು ಕ್ಷಣದಲ್ಲಿ ಆತನನ್ನು ದಾಟಿಬಿಡಬಹುದು. ಆ ಸಮಯದಲ್ಲಿ ಕುಮಾರ ಮೂರನೇ ನಿಂಬೆ ಹಣ್ಣನ್ನು ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಹಿಂದಕ್ಕೆ ಎಸೆದ-

ಮಾರುತಿ ನಿಂತುಬಿಟ್ಟಳು. ಕಾಲುಗಳಲ್ಲಿ ಶಕ್ತಿ ಉಡುಗಿ, ಏದುತ್ತ ಓಡುತ್ತಿದ್ದ ಕುಮಾರನನ್ನೂ, ಅತಿ ವೇಗವಾಗಿ ಉರುಳುತ್ತಿದ್ದ ನಿಂಬೆ ಹಣ್ಣನ್ನೂ ಒಂದುಸಲ ನೋಡಿದಳು.

ಕೂಡಲೇ ನಿಂಬೆ ಹಣ್ಣಿನ ಹಿಂದೆ ಓಡಿದಳು. ಆಕೆ ನಿಂಬೆ ಹಣ್ಣನ್ನು ಮುಟ್ಟುವ ವೇಳೆಗೆ ಕುಮಾರ 95 ಗಜ ದೂರ ಓಡಿಬಿಟ್ಟಿದ್ದಾನೆ.

ಇನ್ನೊಂದು ಐದುಗಜ ಮಾತ್ರ ಉಳಿದಿದೆ. ಅದನ್ನು ನೋಡಿ ಆತನನ್ನು ಸೇರಲು ಮಾರುತಿ ಓಡಿದ ಓಟ ಮನುಷ್ಯಮಾತ್ರರು ಊಹಿಸಲಾರರು. ಆದರೆ ಲಾಭವಿಲ್ಲದಾಯಿತು. ಆಕೆ ಆತನನ್ನು ಸಮೀಪಿಸುವ ಮೊದಲೇ ಕುಮಾರ ಗಮ್ಯಸ್ಥಾನವನ್ನು ಸೇರಿಬಿಟ್ಟ.

ಈ ಪಂದ್ಯನೋಡಲು ಬಂದ ಜನರ ಹರ್ಷಧ್ವನಿ ಅಷ್ಟಿಷ್ಟಲ್ಲ. ಇಷ್ಟು ದಿನಕ್ಕೆ ನ್ಯಾಯ ದೊರೆಯಿತು. ಎಂದೂ ಸೋಲನ್ನು ಅರಿಯದ ಮಾರುತಿ ಅಂದು ಸೋತುಹೋದಳು. ದಿನಾ ನಡೆಯುತ್ತಿದ್ದ ವಧೆ ಅಂದಿಗೆ ಮುಕ್ತಾಯವಾಯಿತು. ಮಾರುತಿಗೆ ಒಬ್ಬ ಪತಿ ಲಭಿಸಿದ. ವಧೆ ಶಿಲೆಯ ಹತ್ತಿರ ನಿಂದಿದ್ದ ರಾಜಭಟರು ತಮ್ಮ ಆಯುಧಗಳನ್ನು ಒಂದೆಡೆ ಒಗೆದು, ಹೂಮಾಲೆಯನ್ನು ತಂದು ಮಾರುತಿಯ ಕೈಗೆ ಕೊಟ್ಟರು. ಆ ಮಾಲೆಯನ್ನು ಆಕೆ ಕುಮಾರನ ಕೊರಳಿಗೆ ಹಾಕುವಾಗ ನಾಚಿಕೆಯಿಂದ ಆಕೆ ತಲೆ ತಗ್ಗಿಸಿದಳು. ಕಪೋಲಗಳು ಕೆಂಪು ಬಣ್ಣಕ್ಕೆ ತಿರುಗಿದವು. ಮಾರುತಿಯಲ್ಲಿ ಮೊದಲನೇಸಾರಿ ಕಾಣಿಸಿದ ಸ್ತ್ರೀಸಹಜವಾದ ಗುಣಗಳನ್ನು ಕಂಡು ರಾಜಪರಿವಾರ ಆನಂದಪಟ್ಟಿತು.



# ಕಣ್ಣುಗಳನ್ನು ನಂಬಬಹುದೇ?

ನಾವು ಯಾವುದಾದರೊಂದು ಅಸಂಭವವಾದ ವಿಷಯವನ್ನು ಕಂಡು "ನನ್ನ ಕಣ್ಣುಗಳನ್ನು ನಾನೇ ನಂಬದಾದೆ" ಎಂದು ಹೇಳುವೆವು. ಮಾತಿನ ಭರದಲ್ಲಿ ಹಾಗೆ ನುಡಿಯುವೆವೇ ಹೊರತು ಕಣ್ಣುಗಳನ್ನು ನಂಬದವರು ತೀರಾ ವಿರಳ. ಅದಕ್ಕೆ ನಿದರ್ಶನವೇನೆಂದರೆ ಯಾರಾದರೂ ಒಂದು ವಿಷಯವನ್ನು ಒತ್ತಿ ಹೇಳಬೇಕಾದರೆ 'ಕಣ್ಣಾರೆ ಕಂಡೆ' ಎಂದು ಹೇಳುತ್ತಾರೆ. ಆದರೆ ಕಣ್ಣಾರೆ ಕಂಡಿದ್ದೂ ಸಹ ಪೊರಪಾಟಾಗಬಹುದು.

ನಮ್ಮ ಇತರ ಇಂದ್ರಿಯಗಳಂತೆ ಕಣ್ಣುಗಳೂ ಸಹ ಆಗಾಗ ತಪ್ಪು ಮಾಡುತ್ತಿರುತ್ತವೆ. ಈ ಕೆಳಗಿನ ಚಿತ್ರ ನೋಡಿ. ಎಡಗಡೆ ಒಂದು ಅಡ್ಡಗೆರೆ, ಒಂದು × ಗುರುತು, ಬಲಗಡೆ ಒಂದು ಕರಿಯ ಚುಕ್ಕೆ ಇದೆ. ನಿಮ್ಮ ದೃಷ್ಟಿ ಒಂದೊಂದು ಸಾರಿ ಕೆಲಸ ಮಾಡುವುದಿಲ್ಲವೆಂದು ರುಜುವಾತು ಮಾಡಬೇಕೆಂದರೆ ಎಡಗಣ್ಣನ್ನು ಮುಚ್ಚಿಕೊಂಡು ಬಲಗಣ್ಣಿನಿಂದ × ಗುರುತನ್ನು ನೋಡಿ. ಈ ಗುರುತುಗಳನ್ನು ಮೊದಲು ಒಂದು ಅಡಿ ದೂರ ಇಟ್ಟುಕೊಂಡು ನಿಧಾನವಾಗಿ ಕಣ್ಣಿನ ಹತ್ತಿರಕ್ಕೆ ಜರುಗಿಸುತ್ತಿರಿ. × ಗುರುತನ್ನು ನೋಡುತ್ತಿದ್ದರೂ ನಿಮಗೆ ಕರಿಯ ಚುಕ್ಕೆ ಕಾಣಿಸುತ್ತಲೇ ಇರುತ್ತದೆ.



ಆದರೆ ಸ್ವಲ್ಪದೂರ ಬರುವಷ್ಟರಲ್ಲಿ, ಆ ಚುಕ್ಕೆ ಮಾಯವಾಗುವುದು. ಆದರೆ ಕಾಗದ ಮತ್ತಷ್ಟು ಹತ್ತಿರ ಬಂದಾಗ ಕರಿಯ ಚುಕ್ಕೆ ಮತ್ತೆ ಕಾಣಿಸುತ್ತದೆ!



2. ಪಕ್ಕದಲ್ಲಿ ಎರಡು ಚದರಗಳಿವೆ. ಒಂದು ಬಿಳಿಯದು. ಮತ್ತೊಂದು ಕಪ್ಪಿನದು. ಎರಡರಲ್ಲಿ ದೊಡ್ಡದ್ಯಾವುದು? ಬಹಳ ಜನ ಬಿಳಿಯದು ದೊಡ್ಡದೆಂದು ಹೇಳುವರು. ಆದರೆ ವಾಸ್ತವವಾಗಿ ಬಿಳಿ ಚದರ ಕಪ್ಪು ಚದರಕ್ಕಿಂತ ಚಿಕ್ಕದು!

3. ಈ ಅಡ್ಡಗೆರೆ ಮತ್ತು ನಿಲುವು ಗೆರೆಗಳ ಸಾಲುಗಳನ್ನು ನೋಡಿ. ಮೊದಲನೆಯದರಲ್ಲಿ ಅಗಲಕ್ಕಿಂತಲೂ ಉದ್ದ ಹೆಚ್ಚು ಇರುವಂತೆ ಕಾಣಿಸುವುದು. ಎರಡನೆಯದರಲ್ಲಿ ಉದ್ದಕ್ಕಿಂತಲೂ ಅಗಲ ಹೆಚ್ಚಿರುವಂತೆ ಕಾಣಿಸುವುದು. ಆದರೆ ನಿಜ ಹೇಳಬೇಕಾದರೆ ಎರಡೂ ಸಮ ಚೌಕಗಳು.





ಈಗ ಹೇಳಿ, ಕಣ್ಣುಗಳನ್ನು ನಂಬಬಹುದೆಂದು ಹೇಳುವಿರಾ?



# ಹೆಣ್ಣು ಕೋತಿ

ಹಿಂದೆ ಕಾಂಚೀಪುರವನ್ನು ಕನಕಸೇನನೆಂಬ ರಾಜನು ಪಾಲಿಸುತ್ತಿದ್ದನು. ಆತನು ವಿಲಾಸ ಪುರುಷ. ದೂರದೂರ ದೇಶಗಳಿಂದ ಅನೇಕ ವಿಧವಾದ ಹೂವಿನ ಗಿಡಗಳನ್ನು ತರಿಸಿ, ರಾಜ ಭವನದ ಹಿಂದೆ ಒಂದು ಸುಂದರ ಉದ್ಯಾನವನ್ನು ನಿರ್ಮಿಸಿದ.

ಅಂದವಾದ ಆ ವನದಲ್ಲಿ ಅತಿ ಮನೋಹರವಾದ ಕೊಳವೊಂದನ್ನು ಕಟ್ಟಿಸಿದ. ಕೊಳದ ಸುತ್ತಲೂ ದೊಡ್ಡ ದೊಡ್ಡ ಮರಗಳೂ ಅವುಗಳನ್ನು ಸುತ್ತಿಕೊಂಡು ವಿವಿಧ ಹೂವಿನ ಬಳ್ಳಿಗಳೂ ಇದ್ದುವು.

ಒಂದುದಿನ ಕಾಂಚಿಪುರದ ರಾಣಿ ಕಮಲಾವತಿ ಕೊಳಕ್ಕೆ ಜಲಕವಾಡಲು ಹೊರಟಳು. ಕೊಳದಲ್ಲಿ ಇಳಿಯುವ ಮುನ್ನ ತಾನು ಧರಿಸಿದ್ದ ಆಭರಣಗಳೆಲ್ಲವನ್ನೂ ದಾಸಿಯ ಕೈಗೆ ಕೊಟ್ಟಳು. ಅವುಗಳಲ್ಲಿ ಒಂದು ಅಮೂಲ್ಯವಾದ ರತ್ನಹಾರವಿತ್ತು.

ರಾಣಿ ಕೊಟ್ಟ ಆಭರಣಗಳೆಲ್ಲವನ್ನೂ ಕೊಳದ ದಡದಲ್ಲಿಟ್ಟು ದಾಸಿ ಅಲ್ಲಿದ್ದ ಗಿಡಗಳಿಂದ ಪುಷ್ಪಗಳನ್ನು ಕೀಳುತ್ತಿದ್ದಳು. ಇಷ್ಟರಲ್ಲಿ ಮರದ ಮೇಲಿದ್ದ ಒಂದು ಹೆಣ್ಣುಕೋತಿ ಹಠಾತ್ತನೆ ಕೆಳಗೆ ಧುಮುಕಿ ಆ ರತ್ನಹಾರವನ್ನು ತೆಗೆದುಕೊಂಡು, ಮತ್ತೆ ಮರದ ಮೇಲಕ್ಕೆ ಚಂಗನೆ ಹಾರಿತು.

ಕೋತಿ ಹಾರವನ್ನು ತೆಗೆದುಕೊಂಡು ಹೋಗುತ್ತಿರುವುದನ್ನು ದಾಸಿ ನೋಡಿದಳು. ಆದರೇನೂ ಮಾಡಲಾರದೆ ಸುಮ್ಮನೆ ನಿಂತುಬಿಟ್ಟಳು. ಇಷ್ಟರಲ್ಲಿ ಕಮಲಾವತಿ ಕೊಳದಿಂದ ಹೊರಗೆ ಬಂದು ವಸ್ತ್ರಗಳನ್ನು ಧರಿಸಿ, ಆಭರಣಗಳಲ್ಲಿ ರತ್ನಹಾರ ಕಾಣಿಸದಾಗಲು ದಾಸಿಯನ್ನು ಕೇಳಿದಳು.

"ಏನೋಮ್ಮ, ನೀವು ಕೊಟ್ಟ ಆಭರಣಗಳೆಲ್ಲವನ್ನು ಅಲ್ಲೇ ಇಟ್ಟೆ" ಎಂದಳು ದಾಸಿ, ರಾಣಿ ತನ್ನ ಅಜಾಗರೂಕತೆಗೆ ಎಲ್ಲಿ ಕೋಪಗೊಳ್ಳುವಳೋ ಎಂಬ ಹೆದರಿಕೆಯಿಂದ.

ರಾಣಿ ಹೋಗಿ ರಾಜನಿಗೆ ಈ ಕಳ್ಳತನದ ವಿಷಯ ಹೇಳಿದಳು. ರಾಜನು ಮಂತ್ರಿಯನ್ನು ಕರೆಯಿಸಿ ಸೂರ್ಯಾಸ್ತಮಯದೊ

ಎಂ. ರುದ್ರಪ್ಪ, ಶಿರಗುಪ್ಪೆ

ಳಗೆ ಕಳ್ಳನನ್ನು ಹುಡುಕಿ ತರಬೇಕೆಂದು ಆಜ್ಞಾಪಿಸಿದ.

ರಾಜಾಜ್ಞೆಯ ಪ್ರಕಾರ ಮಂತ್ರಿ ಕೂಡಲೇ ದಂಡನಾಯಕನನ್ನು ಕರೆದು, ನಡೆದುದನ್ನೆಲ್ಲಾ ವಿವರಿಸಿ, ಅಂದು ಸಂಜೆಯೊಳಗೆ ರತ್ನಹಾರದೊಂದಿಗೆ ಕಳ್ಳನನ್ನೂ ಹಿಡಿದು ತರದಿದ್ದ ಪಕ್ಷಕ್ಕೆ ತನ್ನ ನೌಕರಿಗೆ ಎಳ್ಳುನೀರು ಕೊಡಬೇಕಾದೀತು ಎಂದೂ ಎಚ್ಚರಿಸಿದ.

ದಂಡನಾಯಕನು ಯುದ್ಧಕ್ಕೆ ಹೊರಡುತ್ತಿರುವಂತೆ ನೂರಾರು ಸೈನಿಕರೊಂದಿಗೆ ಹೊರಟ. ಪಟ್ಟಣವನ್ನೆಲ್ಲಾ ಸುತ್ತಿದ. ಕಳ್ಳ ಯಾರೋ, ಹೇಗಿರುವನೋ ಯಾರಿಗೂ ತಿಳಿಯದು. ಆದರೆ ಕಳ್ಳತನ ಮಾಡಿದಾತ ಬಡವನಾಗಿರಬೇಕು, ಮಲಿನವಾದ ಉಡುಪನ್ನು ಧರಿಸಿ, ಗಡ್ಡಬಿಟ್ಟುಕೊಂಡಿರಬೇಕು ಎಂದು ಅವರ ಅಭಿಪ್ರಾಯ.

ಆ ಪಟ್ಟಣವೆಲ್ಲವನ್ನೂ, ಅದರ ಸುತ್ತಮುತ್ತಲಿರುವ ಅರಣ್ಯಗಳನ್ನೂ ಹುಡುಕಿ, ಸೂರ್ಯಾಸ್ತಮಯದ ಸಮಯಕ್ಕೆ ಚಿಂದಿಯನ್ನು ತೊಟ್ಟಿದ್ದಾತನನ್ನು ಎಳೆದುಕೊಂಡು ಬಂದರು. ಕಳ್ಳ ಸಿಕ್ಕಿದ ವಾರ್ತೆ ಕೇಳಿದ ಕೂಡಲೇ ರಾಜ ದರ್ಬಾರಿಗೆ ಬಂದ.

"ರತ್ನಹಾರವನ್ನು ಎಲ್ಲಿ ಬಚ್ಚಿಟ್ಟೆ?" ಎಂದು ಗದರಿಸಿದ ರಾಜ. ಕಳ್ಳತನ ಮಾಡಲಿಲ್ಲವೆಂದರೆ ಯಾರೂ ನಂಬುವುದಿಲ್ಲ; ಕೂಡಲೇ ಗಲ್ಲಿಗೇರಿಸುವರು ಎಂದು ಹೆದರಿ ಆ ಬಡವನು "ರತ್ನ




ಹಾರವನ್ನು ಕೋಶಾಧಿಕಾರಿಗಳಿಗೆ ಕೊಟ್ಟೆ ಮಹಾಸ್ವಾಮಿ" ಎಂದ. ಹಿಗೆಂದ ಕೂಡಲೇ ಕೋಶಾಧಿಪತಿಯ ಕೈಗಳನ್ನು ಬಿಗಿದು ಕಟ್ಟಿ ರಾಜನಮುಂದೆ ತಂದು ನಿಲ್ಲಿಸಿದರು. ರಾಜ ಅದೇ ಪ್ರಶ್ನೆ ಕೇಳಿದ. ಕೋಶಾಧಿಪತಿಗೆ ರಾಜನ ಗುಣ ಗೊತ್ತು. ಆದುದರಿಂದ ತಡಬಡಿಸದೆ ನಮ್ಮ ಆಸ್ಥಾನ ಜೋಯಿಸರಿಗೆ ಕೊಟ್ಟೆ" ಎಂದ.

ಆಸ್ಥಾನ ಜ್ಯೋತಿಷ್ಯನ ಕೈ ಕಾಲು ಕಟ್ಟಿ ರಾಜನ ಮುಂದೆ ನಿಲ್ಲಿಸಿದರು. ರಾಜ ಹಿಂದಿನ ಇಬ್ಬರನ್ನು ಪ್ರಶ್ನೆ ಮಾಡಿದಂತೆಯೇ ಮಾಡಿದ. ಅದಕ್ಕೆ ಜೋತಿಷ್ಕನು ತಡಬಡಿಸದೆ "ಮಂತ್ರಿಯವರ ಹಿರಿಯ ಕುಮಾರನಿಗೆ ಕೊಟ್ಟೆ" ಎಂದ.

ಳಗೆ ಕಳ್ಳನನ್ನು ಹುಡುಕಿ ತರಬೇಕೆಂದು ಆಜ್ಞಾಪಿಸಿದ.

ರಾಜಾಜ್ಞೆಯ ಪ್ರಕಾರ ಮಂತ್ರಿ ಕೂಡಲೇ ದಂಡನಾಯಕನನ್ನು ಕರೆದು, ನಡೆದುದನ್ನೆಲ್ಲಾ ವಿವರಿಸಿ, ಅಂದು ಸಂಜೆಯೊಳಗೆ ರತ್ನಹಾರದೊಂದಿಗೆ ಕಳ್ಳನನ್ನೂ ಹಿಡಿದು ತರದಿದ್ದ ಪಕ್ಷಕ್ಕೆ ತನ್ನ ನೌಕರಿಗೆ ಎಳ್ಳುನೀರು ಕೊಡಬೇಕಾದೀತು ಎಂದೂ ಎಚ್ಚರಿಸಿದ.

ದಂಡನಾಯಕನು ಯುದ್ಧಕ್ಕೆ ಹೊರಡುತ್ತಿರುವಂತೆ ನೂರಾರು ಸೈನಿಕರೊಂದಿಗೆ ಹೊರಟ. ಪಟ್ಟಣವನ್ನೆಲ್ಲಾ ಸುತ್ತಿದ. ಕಳ್ಳ ಯಾರೋ, ಹೇಗಿರುವನೋ ಯಾರಿಗೂ ತಿಳಿಯದು. ಆದರೆ ಕಳ್ಳತನ ಮಾಡಿದಾತ ಬಡವನಾಗಿರಬೇಕು, ಮಲಿನವಾದ ಉಡುಪನ್ನು ಧರಿಸಿ, ಗಡ್ಡಬಿಟ್ಟುಕೊಂಡಿರಬೇಕು ಎಂದು ಅವರ ಅಭಿಪ್ರಾಯ.

ಆ ಪಟ್ಟಣವೆಲ್ಲವನ್ನೂ, ಅದರ ಸುತ್ತಮುತ್ತಲಿರುವ ಅರಣ್ಯಗಳನ್ನೂ ಹುಡುಕಿ, ಸೂರ್ಯಾಸ್ತಮಯದ ಸಮಯಕ್ಕೆ ಚಿಂದಿಯನ್ನು ತೊಟ್ಟಿದ್ದಾತನನ್ನು ಎಳೆದುಕೊಂಡು ಬಂದರು. ಕಳ್ಳ ಸಿಕ್ಕಿದ ವಾರ್ತೆ ಕೇಳಿದ ಕೂಡಲೇ ರಾಜ ದರ್ಬಾರಿಗೆ ಬಂದ.

"ರತ್ನಹಾರವನ್ನು ಎಲ್ಲಿ ಬಚ್ಚಿಟ್ಟೆ?" ಎಂದು ಗದರಿಸಿದ ರಾಜ. ಕಳ್ಳತನ ಮಾಡಲಿಲ್ಲವೆಂದರೆ ಯಾರೂ ನಂಬುವುದಿಲ್ಲ; ಕೂಡಲೇ ಗಲ್ಲಿಗೇರಿಸುವರು ಎಂದು ಹೆದರಿ ಆ ಬಡವನು "ರತ್ನ




ಹಾರವನ್ನು ಕೋಶಾಧಿಕಾರಿಗಳಿಗೆ ಕೊಟ್ಟೆ ಮಹಾಸ್ವಾಮಿ" ಎಂದ. ಹಿಗೆಂದ ಕೂಡಲೇ ಕೋಶಾಧಿಪತಿಯ ಕೈಗಳನ್ನು ಬಿಗಿದು ಕಟ್ಟಿ ರಾಜನಮುಂದೆ ತಂದು ನಿಲ್ಲಿಸಿದರು. ರಾಜ ಅದೇ ಪ್ರಶ್ನೆಕೇಳಿದ. ಕೋಶಾಧಿಪತಿಗೆ ರಾಜನ ಗುಣ ಗೊತ್ತು. ಆದುದರಿಂದ ತಡಬಡಿಸದೆ ನಮ್ಮ ಆಸ್ಥಾನ ಜೋಯಿಸರಿಗೆ ಕೊಟ್ಟೆ" ಎಂದ.

ಆಸ್ಥಾನ ಜ್ಯೋತಿಷ್ಯನ ಕೈ ಕಾಲು ಕಟ್ಟಿ ರಾಜನ ಮುಂದೆ ನಿಲ್ಲಿಸಿದರು. ರಾಜ ಹಿಂದಿನ ಇಬ್ಬರನ್ನು ಪ್ರಶ್ನೆ ಮಾಡಿದಂತೆಯೇ ಮಾಡಿದ. ಆದಕ್ಕೆ ಜೋತಿಷ್ಕನು ತಡಬಡಿಸದೆ "ಮಂತ್ರಿಯವರ ಹಿರಿಯ ಕುಮಾರನಿಗೆ ಕೊಟ್ಟೆ" ಎಂದ.

ತಾನು ಕೇಳಿದುದನ್ನೆಲ್ಲಾ ವಿವರಿಸಿ ಹೇಳಿದ.

ಮಂತ್ರಿಯು ಮಾತುಗಳನ್ನು ಕೇಳಿ ರಾಜನು ಒಂದು ನಿಟ್ಟುಸಿರನ್ನುಬಿಟ್ಟ. ತನ್ನ ರಾಣಿಗೆ ಪ್ರಿಯವಾದ ಆ ರತ್ನಹಾರ ಯಾರು ಅಪಹರಿಸಿದ್ದಾರೆ? ಇದೇ ಯೋಚನೆ ರಾಜನಿಗೆ.

ಬೆಳಗಾಯಿತು. ದಾಸಿಯವಳನ್ನು ಕರೆ ಕಳುಹಿಸಿದ ರಾಜ. "ನಿಜ ನುಡಿಯುವೆಯಾ, ಇಲ್ಲ ನಿನ್ನ ತುಂಡು ತುಂಡು ಮಾಡಿ ಚೆಲ್ಲಬೇಕೋ, ಹೇಳು" ಎಂದು ಬೆದರಿಸಿದ.

ದಾಸಿ ನಡುಗಿಬಿಟ್ಟಳು. "ಮಹಾರಾಜಾ, ನಾನು ನಿರ್ದೋಷಿ, ಆದರೆ ಕೊಳದ ಪಕ್ಕದಲ್ಲಿರುವ ಮರವೊಂದರಮೇಲೆ ಹೆಣ್ಣು ಕೋತಿಯೊಂದಿದೆ. ಅದರ ಮೇಲೆ ನನಗೆ ತುಂಬಾ ಅನುಮಾನ" ಎಂದಳು.

"ಆ ಹೆಣ್ಣುಕೋತಿಯ ಮೇಲೇಕೆ ಅನುಮಾನ, ಅದು ನಿನಗಿಂತಲೂ ಅಂದವಾಗಿದೆ ಎಂತಲೋ?" ಕಣ್ಣು ಕೆಂಪಗೆ ಮಾಡಿದ ರಾಜ.

"ಅಲ್ಲ ಪ್ರಭೂ, ಅದು ಮಹಾರಾಣಿಯವರಂತೆ ಒಯ್ಯಾರವಾಗಿ ನಡೆಯಲು ಪ್ರಯತ್ನಿಸುತ್ತಿದ್ದುದನ್ನು ನಾನು ನೋಡಿರುವೆನು. ರಾಣಿಯವರು ಸ್ನಾನ ಮಾಡುವಾಗ, ಅದೂ ಸಹ ಮರದ ಕೊಂಬೆಯಮೇಲೆ ಕುಳಿತು ಸ್ನಾನ ಮಾಡುವಂತೆ ನಟಿಸುವುದು. ರಾಣಿಯವರಂತೆ ಅದೂ ಸಹ ಕಂಡೂ ಕಾಣಿಸದಂತೆ ಕಿರುನಗೆ ಬೀರಲು ಪ್ರಯತ್ನಿಸುತ್ತದೆ" ಎಂದಳು ಧೈರ್ಯದಿಂದ. ರಾಜನಿಗೆ ದಾಸಿಯ ಮಾತು ಕೇಳಿ ಕಡು




ಕೋಪವುಂಟಾಯಿತು. ದಾಸಿಯನ್ನು ಸೀಳಿಬಿಡೋಣವೇ ಎಂದೆನ್ನಿಸಿತು. ಆದರೆ ರತ್ನಹಾರದ ವಿಷಯ ಜ್ಞಾಪಕಕ್ಕೆ ಬಂದು ಆತ ಶಾಂತವಹಿಸಿದ.

"ಹಾಗಾದರೆ ರತ್ನಹಾರವನ್ನು ಆ ಕೋತಿ ಅಪಹರಿಸಿತೆನ್ನುವೆಯಾ? ಸರಿ ಸರಿ, ಹಾಗಾದರೆ ಆ ಹಾರವನ್ನು ಅದೆಲ್ಲಿ ಬಚ್ಚಿಟ್ಟಿರುವುದೋ ತಿಳಿಯುವುದು ಹೇಗೆ?" ಎಂದ ರಾಜ.

"ಅದೇನಂತ ಕಷ್ಟಕರವಾದ ಕೆಲಸವಲ್ಲ. ಪ್ರಭೂ" ಎಂದು ಮೆಲ್ಲನೆ ಮುಸಿಮುಸಿ ನಕ್ಕಳು ದಾಸಿ.

"ಅಷ್ಟು ಸುಲಭವೇ ಅದು?" ಎಂದು ಕೇಳಿದ ರಾಜ ಉಗ್ರನಾಗಿ.

"ತಾವು ಅಂತಃಪುರದಲ್ಲಿರುವಾಗತಾನೇ ರಾಣಿಯವರು ಆ ರತ್ನಹಾರವನ್ನು ಧರಿಸುವರು" ಎಂದು ಪ್ರಶ್ನೆಮಾಡಿದಳು.

"ಇರಬಹುದು" ಎಂದ ರಾಜ ಹುಬ್ಬು ಗಂಟಿಕ್ಕಿ.

"ಪ್ರಭೂ, ನಿಮಗೆ ನನ್ನ ಮೇಲೆ ಕೋಪ ಬರುವುದೆಂದು ನಾನು ಅಷ್ಟು ವಿವರವಾಗಿ ಹೇಳಲಿಲ್ಲ. ಆದರೆ ಆ ಹೆಣ್ಣು ಕೋತಿ ರತ್ನ ಹಾರವನ್ನು ಎಲ್ಲಿ ಬಚ್ಚಿಟ್ಟಿರುವುದೋ ತಿಳಿದುಕೊಳ್ಳಬೇಕಾದರೆ ನಾವೊಂದು ಗಂಡು ಕೋತಿಯನ್ನು ತಂದರೆ ಎಲ್ಲಾ ಗೊತ್ತಾಗಿಬಿಡುವುದು" ಎಂದಳು.

ದಾಸಿಯ ಮಾತಿನ ಗೂಢಾರ್ಥವನ್ನು ಗ್ರಹಿಸಿ ರಾಜ ನಸುನಕ್ಕ. ರಾಣಿಯನ್ನು ಹೆಣ್ಣು ಕೋತಿಯೊಂದಿಗೂ, ತನ್ನನ್ನು ಗಂಡು ಕೋತಿಯೊಂದಿಗೂ, ಹೋಲಿಸಿದಳೆಂದು ಅರಿತುಕೊಂಡ. ಆದರೆ ಹೇಗಾದರೂ ರತ್ನಹಾರವನ್ನು ಪಡೆಯಬೇಕು.

ರಾಜನು ಆಜ್ಞಾಪಿಸಿದ ಕೂಡಲೇ ಕ್ಷಣ ಮಾತ್ರದಲ್ಲಿ ಒಂದು ಗಂಡು ಕೋತಿಯನ್ನು ತಂದರು. ರಾಜೋಚಿತವಾದ ಉಡುಪನ್ನು ಹಾಕಿ ಅದನ್ನು ಅಲಂಕರಿದರು. ರಾಜನಹಿಂದೆ ಪರಿವಾರ ಹೊರಟಂತೆ ಅದರಹಿಂದೆ ರಾಜ, ಮಂತ್ರಿ ಮೊದಲಾದವರು ಪರಿವಾರದಂತೆ ಉದ್ಯಾನವನ್ನು ಸೇರಿಕೊಂಡರು.

ಮರದ ಮೇಲಿದ್ದ ಕೋತಿ ಇದೆಲ್ಲವನ್ನೂ ನೋಡಿತು. ಒಂದು ನೆಗೆತ ನೆಗೆದು ಆ ಪಕ್ಕದಲ್ಲೇ ಇದ್ದ ಪೊಟರೆಯಲ್ಲಿ ನುಗ್ಗಿ, ಅಲ್ಲಿ ಬಚ್ಚಿಟ್ಟಿದ್ದ ರತ್ನಹಾರವನ್ನು ಹೊರಗೆ ತೆಗೆದು, ಕೊರಳಲ್ಲಿ ಹಾಕಿಕೊಂಡಿತು. ತರುವಾಯ ಮರದಿಂದು ಇಳಿದು ರಾಣಿಯಂತೆ ಒಯ್ಯಾರವಾಗಿ ನಡೆಯುತ್ತಾ ಗಂಡು ಕೋತಿಯ ಕಡೆಗೆ ಬಂದಿತು.

ರಾಜಭಟರು ಕೋತಿಯನ್ನು ಹಿಡಿದು ಅದರ ಕೊರಳಲ್ಲಿದ್ದ ರತ್ನಹಾರವನ್ನು ಕಿತ್ತುಕೊಂಡರು. ಅದು ಕಿಚಕಿಚನೆ ಕಿರುಚುತ್ತಾ ಮರದಮೇಲಕ್ಕೆ ನೆಗೆಯಿತು.

ರತ್ನಹಾರ ರಾಣಿಗೆ ಕೊಟ್ಟು ಬಂಧಿತರನ್ನು ಬಿಟ್ಟುಬಿಟ್ಟರು. ಎಲ್ಲರೊಂದಿಗೆ ರಾಜನೂಸಹ ದಾಸಿಯ ಬುದ್ಧಿವಂತಿಕೆಗೆ ಮೆಚ್ಚಿಕೊಂಡನು.






# ಗುರುವಿನಾಜ್ಞೆ

ಒಂದುದಿನ ಗುರುಗೋವಿಂದಸಿಂಗರು ಅನಂದ ಪುರದ ಬೀದಿಗಳಲ್ಲಿ ಪಾದಚಾರಿಯಾಗಿ ಹೋಗುತ್ತಿದ್ದರು. ಅವರು ಬೆಲೆಬಾಳುವ ಉಡುಪನ್ನು ಧರಿಸಿದ್ದರು. ಅವರ ಶಿಷ್ಯರನೇಕರು ಅವರನ್ನು ಹಿಂಬಾಲಿಸುತ್ತಿದ್ದರು.

ಹಾಗೇ ಹೋಗುತ್ತಿರುವಲ್ಲಿ ಒಂದುಕಡೆ ಒಂದುಗಲ್ಲಿ ಸಿಕ್ಕಿತು. ಆ ಗಲ್ಲಿಯಲ್ಲಿ ಒಬ್ಬ ಬಡಕಾಮಾಟಿಗ ಒಂದು ಮನೆಯಮೇಲೆ ಕುಳಿತುಕೊಂಡು ದುರಸ್ತು ಮಾಡುತ್ತಿದ್ದ.

ಆ ಗಲ್ಲಿಯಲ್ಲಿ ಹೋಗುತ್ತಿದ್ದಾಗ ಅಕಸ್ಮಾತ್ ಕಾಮಾಟಿಗನ ಕೈಯಲ್ಲಿದ್ದ ಕೆಸರು ಹಾರಿ ಗುರುಗೋವಿಂದರ ಉಡುಪಿನಮೇಲೆ ಬಿತ್ತು. ಗುರುಗೋವಿಂದರಹಿಂದೆ ಇದ್ದ ಶಿಷ್ಯಕೋಟಿಗೆ ಇದನ್ನು ನೋಡಿ ಕೋಪಬಂತು. "ಏನೋ, ದಾರಿಯಲ್ಲಿ ಸುಳಿದಾಡುವವರನ್ನು ನೋಡಲಿಕ್ಕಿಲ್ಲವೇ? ನಿನಗಷ್ಟು ಸೊಕ್ಕು ಬಂತೋ" ಎಂದು ಅವನನ್ನು ನಾನಾರೀತಿ ಬಯ್ದರು.

ಗುರುಗೋವಿಂದರೂಸಹ ಹಿಂದಕ್ಕೆ ತಿರುಗಿ ನೋಡಿದರು. ಮೇಸ್ತ್ರಿ ಕೆಸರಿನಿಂದ ಕೆಲಸ ಮಾಡುತ್ತಿರುವುದು ಕಾಣಿಸಿತು. ಆಗ ಗುರುಗೋವಿಂದರು ತಮ್ಮ ಶಿಷ್ಯರೊಂದಿಗೆ "ಅವನ ಕಪಾಳಕ್ಕೊಂದು ಏಟುಕೊಡಿ" ಎಂದು ಆಜ್ಞಾಪಿಸಿದರು.

ಆ ಮಾತು ಕೇಳಿದಕೂಡಲೇ, ಗುರುವಿನ ಆಜ್ಞೆ ಪ್ರಕಾರ ಕಾಮಾಟಿಗಾರನಿಗೆ ತಲಾ ಒಂದೊಂದು ಏಟು ಕೊಟ್ಟರು. ಕಾಮಾಟಿಗಾರನ ಮುಖ ಕೆಂಪಗಾಯಿತು. "ನನ್ನದು ತಪ್ಪಾಯಿತು. ಕ್ಷಮಿಸಿ ದೇವರೂ" ಎಂದು ಬೇಡಿಕೊಂಡ.

ಗುರೂಜಿ ಆ ಮೇಸ್ತ್ರಿಯನ್ನು ಹತ್ತಿರಕೆ ಕರೆದರು. ಶಿಷ್ಯರನ್ನೂ ಕೂಗಿದರು. "ನಾನು ಆತನಿಗೆ ಒಂದು ಏಟನ್ನು ಕೊಡುವಂತೆತಾನೇ ಹೇಳಿದೆ. ಆದರೆ ನೀವೆಲ್ಲರೂಸೇರಿ ಆತನು ಸತ್ತು ಸುಣ್ಣವಾಗುವಂತೆ ಬಡಿದಿರೇಕೆ?" ಎಂದು ಕೇಳಿದರು.

ಉತ್ತರ ಏನೂ ಹೇಳಲಾರದೆ ಅವರೆಲ್ಲ ತಲೆತಗ್ಗಿಸಿದರು. ಅದರಲ್ಲೊಬ್ಬ ಶಿಷ್ಯ ಮುಂದಕ್ಕೆ ಬಂದು "ಗುರೂಜೀ, ನೀವು ಯಾರೊಬ್ಬರನ್ನುಕುರಿತು ಈ ಕೆಲಸ ಕೊಡಲಿಲ್ಲ. ಆದ್ದ

ಜಿ. ವಿ. ಕಾಮತ್, ಮದ್ರಾಸು

ರಿಂದ ನಮ್ಮ ಷ್ಟಕ್ಕೆ ನಾವೇ ನಿಮ್ಮ ಆಜ್ಞೆಯನ್ನು ಪಾಲಿಸಬೇಕೆಂಬ ಆತುರದಿಂದ ಅತನಿಗೆ ತಲಾ ಒಂದೊಂದು ಏಟುಕೊಟ್ಟೆವು" ಎಂದ.

ಆ ಮಾತು ಕೇಳಿದಕೂಡಲೇ ಗುರುಗೋವಿಂದರು ಕಾಮಾಟಿಗಾರನಿಗೆ ಸಮಾಧಾನ ಮಾಡುತ್ತಾ "ಅಣ್ಣಾ ನಿನಗೆ ಮದುವೆ ಆಯಿತೋ?" ಎಂದು ಪ್ರಶ್ನೆಮಾಡಿದರು.

"ಇಲ್ಲ" ಎಂದ.

ಆಗ ಗುರೂಜಿ ಶಿಷ್ಯರಕಡೆ ನೋಡಿ "ನೀವೆಲ್ಲರೂ ನನಗೆ ಪ್ರಿಯಶಿಷ್ಯರು. ನನ್ನ ಬಾಯಿಂದ ಮಾತು ಹೊರಬೀಳುವುದೇತಡ, ಆಚರಣೆಯಲ್ಲಿ ತರುವವರು. ಆಗ ಈ ಕಾಮಾಟಿಗಾರನ ವಿಷಯದಲ್ಲಿ ನಾನು ಹೇಳಿದಕೂಡಲೇ ಬಹಳ ವಿನಯವಿಧೇಯತೆಯಿಂದ ನನ್ನ ಆಜ್ಞೆ ನೆರವೇರಿಸಿದಿರಿ. ಈಗ ಆತನ ವಿಷಯದಲ್ಲಿ ಮತ್ತೊಂದು ಆಜ್ಞೆ ಮಾಡುವೆನು. ತಕ್ಷಣ ನೆರವೇರಿಸಬೇಕು. ಆತನಿಗಿನ್ನೂ ಮದುವೆಯಾಗಿಲ್ಲ. ನಿಮ್ಮ ಹತ್ತಿರ ಪ್ರಾಪ್ತವಯಸ್ಕಳಾದ ಕನ್ಯೆಯಿದ್ದರೆ ಆತನಿಗೆ ಕೊಟ್ಟು ವಿವಾಹ ಮಾಡಿ" ಎಂದರು.

ಶಿಷ್ಯರೆಲ್ಲಾ ಒಬ್ಬೊರಮುಖ ಒಬ್ಬೊರು ನೋಡಿಕೊಂಡರು.

ಅವರಲ್ಲೊಬ್ಬ ಶಿಷ್ಯನು ಮುಂದಕ್ಕೆ ಬಂದು "ಗುರೂಜೀ, ನಾನು ನನ್ನಮಗಳನ್ನು ಆತನಿಗೆ ಕೊಟ್ಟು ವಿವಾಹಮಾಡಿ ಗುರುವಾಜ್ಞೆಯನ್ನು ಪಾಲಿಸುವೆನು" ಎಂದ. ಗುರುಗೋವಿಂದರು ಆತನನ್ನು ಮೆಚ್ಚಿಕೊಂಡರು. ಮಿಕ್ಕವರೆಲ್ಲಾ ಆಶ್ಚರ್ಯಪಟ್ಟರು. ಆತನು ಗುರುಗೋವಿಂದರ ನಿಜಶಿಷ್ಯರಲ್ಲೊಬ್ಬನಾಗಿ ಗುರುಗಳ ಆಶೀರ್ವಾದಪಡೆದ.

ಆಗ ಗುರುಗೋವಿಂದರು ಇತರ ಠಕಾರಿ ಶಿಷ್ಯರಿಗೂ, ಎಂತಹ ತ್ಯಾಗವನ್ನು ಮಾಡಲೂ ಸಿದ್ಧವಾಗಿರುವ ನಿಜಶಿಷ್ಯರಿಗೂ ಇರುವ ಬೇಧವನ್ನು ತೋರಿಸಿದರು.

ಇದನ್ನು ಕೇಳಿ ಮಿಕ್ಕ ಶಿಷ್ಯರೆಲ್ಲಾ ನಾಚಿಕೆಯಿಂದ ತಲೆತಗ್ಗಿಸಿದರು.



## ಉ ತ್ತ ರ ಹೇ ಳು

1. ಪ್ರಪಂಚದಲ್ಲೆಲ್ಲಾ ವಿಶಾಲವಾದದೇಶ ಯಾವುದು ?
    ಅಮೇರಿಕಾ
    ಚೈನಾ
    ರಷ್ಯಾ
2. ಭಾರತದೇಶಕ್ಕೆ ಬಂದ ಮೊತ್ತಮೊದಲನೇ ಗವರ್ನರ್‌ಜನರಲ್ ಯಾರು ?
    ಕ್ಲೈವ್
    ವಾರ್ರಹೇಸ್ಟಿಂಗ್ಸ್
    ಡಾಲ್‌ಹೌಸಿ
3. ಪ್ರಪಂಚದಲ್ಲೆಲ್ಲಾ ದೊಡ್ಡ ಪಕ್ಷಿಯಾವುದು ?
    ರಣಹದ್ದು
    ಉಷ್ಟ್ರಪಕ್ಷಿ
    ನೀರುಕೋಳಿ
4. ಪ್ರಪಂಚದಲ್ಲೆಲ್ಲಾ ದೊಡ್ಡ ಮರುಭೂಮಿ ಯಾವುದು ?
    ಗೋಬಿ
    ಸಹರಾ
    ಥಾರ್
5. ಹಬೆಯಯಂತ್ರ ಕಂಡುಹಿಡಿದವರು ಯಾರು ?
    ಎಡಿಸನ್
    ಡೇವಿ
    ವಾಟ್
6. 'ಶ್ರೀ ರಾಮಾಶ್ವಮೇಧಂ' ಬರೆದ ಕವಿ ಯಾರು ?
    ಕಾಳಿದಾಸ
    ಹರಿಹರ
    ಮುದ್ದಣ

[58 ನೇ ಪುಟನೋಡು]

## ವಿ ನೋ ದ

ಒಂದುಸಾರಿ ಒಬ್ಬ ಹುಡುಗ ತಪ್ಪಿಸಿಕೊಂಡ. ತಂದೆತಾಯಿಗಳು ಪೋಲಿಸಿನವರಿಗೆ ತಿಳಿಸಿದರು. ಪೋಲಿಸಿನವರು ಹತ್ತಿರದಲ್ಲಿದ್ದ ಒಂದು ತೋಟದಲ್ಲೆಲ್ಲಾ ಹುಡುಕಿದರು. ಹುಡುಕುತ್ತಿರುವಾಗ ಅವರೊಂದಿಗೆ ಒಬ್ಬ ಬಾಲಕನಿದ್ದ. ಸಂಗಡ ಇದ್ದ ಹುಡುಗನೇ ತಪ್ಪಿಸಿಕೊಂಡನೆಂದು ಹೇಳಲಾದ ಬಾಲಕನೆಂದು ಅಂದು ಸಾಯಂಕಾಲ ಅವರಿಗೆ ತಿಳಿಯಿತು!

—✤—

ಒಬ್ಬ ಉಪನ್ಯಾಸಕನು ಎಡೆಬಿಡದೆ ಉಪನ್ಯಾಸ ಕೊಟ್ಟನಂತರ " ನಿಮಗೇನಾದರೂ ಸಂದೇಹಗಳಿದ್ದರೆ ಕೇಳಿ ಸಮಾಧಾನ ಕೊಡುತ್ತೇನೆ " ಎಂದು ತನ್ನ ಶ್ರೋತೃಗಳನ್ನು ಕೇಳಿದ. ಕೂಡಲೇ ಒಬ್ಬ ಪುಟಿಂಗಿ ಎದ್ದು " ಟೈಂ ಎಷ್ಟಾಯಿತುಸ್ವಾಮಿ " ಎಂದ.

—✤—

ಸುಂದರಂ ಎಂಬ ಹುಡುಗನೊಬ್ಬ ಶಾಲೆಗೆ ಫೋನ್ ಮಾಡಿ " ಸುಂದರಂ ಜ್ವರದಿಂದ ಮಲಗಿದ್ದಾನೆ. ಇಂದು ಶಾಲೆಗೆ ಬರೋಲ್ಲ " ಎಂದ.

" ಸರಿ, ಯಾರು ಮಾತನಾಡುತ್ತಿರುವುದು " ಎಂದು ಕೇಳಿದರು ಮಾಸ್ತರು.

" ನಮ್ಮತಂದೆ ಮಾತಾಡುತ್ತಿದ್ದಾರೆ " ಎಂದು ತಡಬಡಿಸದೆ ಉತ್ತರಹೇಳಿದ ಸುಂದರು.

—✤—

ಹುಡುಗ ನೊಬ್ಬನೇ ಆಡಿಕೊಳ್ಳುತ್ತಿರುವುದನ್ನು ಕಂಡ ಒಬ್ಬ ದೊಡ್ಡಮನುಷ್ಯರು " ಎಲ್ಲಿಪ್ಪಾ ನಿನ್ನ ಸ್ನೇಹಿತ ?" ಎಂದು ಕೇಳಿದರು.

" ಅವನು ಹೊರಟು ಹೋದ " ಎಂದ ಬಾಲಕ.

" ಮತ್ತೆ ನಿನಗೆ ಬೇಸರವಾಗುವುದಿಲ್ಲವೆ ?"

" ಹೌದು ಬೇಸರವೇನೋ ಆಗುತ್ತಿದೆ ಆದರೆ " ಎಂದು ಮುಂದೆ ಏನೋ ಹೇಳುವಷ್ಟರಲ್ಲಿ, ಆತನ್ನ ಸ್ನೇಹತ ತನ್ನನ್ನು ಹೊಡೆದವಿಷಯ ಜ್ಞಾಪಕಕ್ಕೆ ಬಂದು " ಇದೂ ಸಹ ಚೆನ್ನಾಗಿಯೇ ಇದೆ" ಎಂದು ತನ್ನ ಉತ್ತರ ಪೂರ್ತಿಮಾಡಿದ.




ಭೋಜನಕೂಟಕ್ಕೆಂದು ನೆರೆಯಸಂಸ್ಥಾನಕ್ಕೆ ಹೋಗಿದ್ದ ಶಾಂತಸಿಂಹ ಅನುಚರರೊಂದಿಗೆ ಆಗಲೇ ಬರುತ್ತಿದ್ದಾನೆ. ಆತನು ಬರುವ ವೇಳೆಗೆ ರತ್ನದುರ್ಗ ನಿಶ್ಶಬ್ದವಾಗಿದೆ. ಅದು ಸಾಧಾರಣವಾದ ಶಾಂತತೆಯಲ್ಲ. ಅದರಲ್ಲೇನೋ ಕೌತಕವಿತ್ತು; ಗಭೀರತೆಯಿತ್ತು. ಆಶ್ಚರ್ಯದೊಂದಿಗೆ ಭಯವೂಸಹ ಉಂಟಾಯಿತು, ಶಾಂತಸಿಂಹನಿಗೆ.

ಸರಕ್ಕನೆ ಕುದುರೆಯಿಂದ ಇಳಿದುಹೋಗಿ ನೋಡಿದ. ಸಿಂಹದ್ವಾರವು ಚೂರುಚೂರಾಗಿದೆ ಒಳ ಹೊಕ್ಕರೆ ಎಲ್ಲಿ ನೋಡಿದರೂ ಕಳೇಬರಗಳು! ರಕ್ತ ಪ್ರವಾಹದಲ್ಲಿ ಸ್ತ್ರಿಯರೂ ಶಿಶುಗಳೂ ಬಿದ್ದಿದ್ದಾರೆ. ಅದೊಂದು ಕರಾಳ ದೃಶ್ಯ.

ಸರಸರನೆ ಅಂತಃಪುರಕ್ಕೆ ಹೋಗಿ ನೋಡಿದರೆ ತನ್ನ ಸಹೋದರನ ಮಗ ಸತ್ತು ಬಿದ್ದಿದ್ದಾನೆ. ಪಕ್ಕದಲ್ಲೇ ಬಾಕಿನಿಂದ ಚುಚ್ಚಿಕೊಂಡು ಪ್ರಾಣಬಿಟ್ಟಿದ್ದಾಳೆ ಅಣ್ಣನ ಮಡದಿ! ಆಕೆಯ ಆಭರಣಗಳೆಲ್ಲವನ್ನೂ ಬಲವಂತದಿಂದ ಯಾರೋ ಕಿತ್ತುಕೊಂಡಂತೆ ಸ್ಪಷ್ಟವಾಗಿ ಕಾಣುತಿತ್ತು. ಇದೆಲ್ಲವನ್ನೂ ನೋಡಿ ಶಾಂತ ಸಿಂಹ ನಿಶ್ಚೇಷ್ಟಿತನಾದ.

ಅಷ್ಟರಲ್ಲಿ ಒಂದು ಮೂಲೆಯಲ್ಲಿ ಯಾರೋ ಮೂಲುಗುತ್ತಿದ್ದರು. ಹತ್ತಿರಹೋಗಿ ನೋಡಿದ. ತಮ್ಮ ಕುಲಪುರೋಹಿತ ಕೊನೆ ಯುಸಿರು ಬಿಡುತ್ತಿದ್ದಾನೆ.

ಆತನೆಂದ "ಸ್ವಾಮಿ, ಕ್ರೂರಸಿಂಹ ದಂಡೆತ್ತಿ ಬಂದ. ನಮ್ಮ ಜನ ಅಜಾಗ್ರತೆಯಾಗಿದ್ದರು. ದ್ರೋಹಿಗಳು ಕೆಲವರು ಶತ್ರುಗಳಿಗೆ ನಮ್ಮ ಗುಟ್ಟುಗಳೆಲ್ಲವನ್ನೂ ತಿಳಿಸಿದರು. ಅದರಿಂದ ನಿಮ್ಮ ಅಣ್ಣಂದಿರು ಸುಲಭವಾಗಿ ಸೋತುಹೋದರು. ಶತ್ರುಗಳ ದುಷ್ಕೃತ್ಯಗಳಿಗೆ ಮಿತಿಯೇ ಇಲ್ಲವಾಯಿತು.

"ಸ್ತ್ರೀಯರನ್ನೂ ಶಿಶುಗಳನ್ನೂ ಚಿತ್ರವಧೆಗೆ ಗುರಿಮಾಡಿ ಎಲ್ಲವನ್ನೂ ದೋಚಿಕೊಂಡರು. ಮೂಲೆಮೂಲೆಗಳಲ್ಲೂ ಹುಡುಕಿದರು. ಯಾವುದಕ್ಕಾಗಿ ಅವರು ದಂಡೆತ್ತಿ ಬಂದು ತಡಕಾಡಿದರೋ ಆ ವಜ್ರವನ್ನುಮಾತ್ರ ಕಂಡು ಹಿಡಿಯಲಾಗಲಿಲ್ಲ. ಆ ವಜ್ರವು ನನ್ನ ಕೈಯಲ್ಲಿದೆ. ಎಷ್ಟೇ ದುರುಳರಾದರೂ ಬ್ರಹ್ಮ ಹತ್ಯೆಗೆ

ಎನ್. ಮಹಾದೇವ, ಹುಬ್ಬಳ್ಳಿ

ಕೈಹಾಕುವುದಿಲ್ಲವಷ್ಟೇ. ಆದುದರಿಂದ ನಾನಾದರೂ ಬದುಕಿರುವೆನೆಂದು ನಿಮ್ಮ ಅತ್ತಿಗೆಯವರು ಸಾಯುವಮುನ್ನ ಇದನ್ನು ನನ್ನ ಕೈಗೆ ಕೊಟ್ಟರು...."

ಎಂದು ಹೇಳುತ್ತಿದ್ದಂತೆಯೇ ಆತನ ಕಣ್ಣುಗಳು ಮಿಂಚಿನಂತೆ ಹೊಳೆದವು. ತನ್ನ ಯಜಮಾನನ ಸೊತ್ತು ಆತನಿಗೆ ಒಪ್ಪಿಸಿ ಕಣ್ಣುಮುಚ್ಚಿದ ಆ ಬ್ರಾಹ್ಮಣ.




ಶಾಂತಿಸಿಂಹನು ಅಪರೂಪವಾದ ಆ ವಜ್ರವನ್ನು ನಡುವಿನಲ್ಲಿ ಸಿಕ್ಕಿಸಿಕೊಂಡು ಹೊರಗೆ ಬಂದ. ಪ್ರಪಂಚವೆಲ್ಲಾ ಒಂದೇಸಾರಿ ಕತ್ತಲೆ ಆವರಿಸಿದಂತೆ ತೋರಿತು. ನನ್ನವರೆಂಬುವರು ಇಲ್ಲವಾದರು.

ಕ್ರೂರಸಿಂಹ ಆತನಿಗೆ ತಿಳಿಯದವನೇನೂ ಅಲ್ಲ. ಆತ ನೆರೆರಾಜ್ಯವಾದ ಸಿಂಹದುರ್ಗ ಸಂಸ್ಥಾನದ ಅಧಿಪತಿ. ಮಹಾಕ್ರೂರಿ. ರತ್ನದುರ್ಗದ ರಾಜರೊಂದಿಗೆ ಆತನಿಗೆ ವಂಶ ಪಾರಂಪರ್ಯವಾಗಿ ವೈರವಿತ್ತು. ಅದಷ್ಟೇಅಲ್ಲ. ಆತ ರತ್ನದುರ್ಗದ ರಾಜವಂಶಕ್ಕೆ ಸೇರಿದ ಅಪರೂಪವಾದ ಆ ವಜ್ರದಮೇಲೆ ಬಹುದಿನಗಳಿಂದ ಕಣ್ಣಿಟ್ಟಿದ್ದಾನೆ! ಸಮಯ ನೋಡಿಏಟು ಹಾಕಿದೆನೆಂದುಕೊಂಡ ಶಾಂತಿಸಿಂಹ.

ಕೋಟೆಯೆಲ್ಲಾ ಸ್ಮಶಾನಮಯ ವಾಗಿದೆ. ಹೆಸರಿಗಾದರೂ ಒಬ್ಬನೂ ಜೀವಿಸಿಲ್ಲ. ಶಾಂತಸಿಂಹನಿಗೆ ಕ್ಷಣವಾದರೂ ಅಲ್ಲಿ ನಿಲ್ಲಲು ಮನಸ್ಸು ಬರಲಿಲ್ಲ. ಆದುದರಿಂದ ಕುದುರೆ ಹತ್ತಿ ತನ್ನ ಅನುಚರರೊಂದಿಗೆ ಉತ್ತರದಿಕ್ಕಿನ ಕಡೆ ಪ್ರಯಾಣ ಬೆಳೆಸಿದ.

ಆದರೆ ಈ ವಿಷಯ ಕಂಡು ಹಿಡಿದ ಒಬ್ಬ ದ್ರೋಹಿ. ಹಿಂದೆ ಕ್ರೂರಸಿಂಹನಿಗೆ ತಮ್ಮ ಕೋಟೆಯ ರಹಸ್ಯವನ್ನೆಲ್ಲಾ ಬಯಲು ಮಾಡಿದ್ದ ದ್ರೋಹಿಗಳ ಗುಂಪಿಗೆ ಸೇರಿದವನು ಈ ಪಾಪಿ. ಕ್ರೂರಸಿಂಹನು ಬೀಡು ಬಿಟ್ಟಿರುವ ಸ್ಥಳಕ್ಕೆ ಕೂಡಲೇ ಹೊರಟು, ಆತನೊಂದಿಗೆ "ರತ್ನದುರ್ಗದ ವಜ್ರವಿರುವ ಸ್ಥಳ ನನಗೆ ತಿಳಿದಿದೆ. ಈ ರಹಸ್ಯ ಹೇಳಿದರೆ ನನಗೇನು ಕೊಡುವಿರಿ?" ಎಂದು ಕೇಳಿದ.

"ಸಾವಿರ ಮೊಹರಿಗಳು" ಎಂದ ಕ್ರೂರಸಿಂಹ. ಚೌಕಾಸಿ ನಡೆಯಿತು. ತತ್‌ಕ್ಷಣ ಇನ್ನೂರು ಮೊಹರಿಗಳನ್ನು ಕೊಡುವು




ದಾಗಿಯೂ ರಹಸ್ಯ ತಿಳಿದ ತರುವಾಯ ಉಳಿದ ಹಣವನ್ನು ಕೊಡುವುದಾಗಿಯೂ ಒಪ್ಪಂದವಾಯಿತು.

ಕೂಡಲೇ ಅವನಿಗೆ ಹಣ ಕೊಟ್ಟ ಕ್ರೂರ ಸಿಂಹ. ಆಗ ಆ ದ್ರೋಹಿ ಅಪರೂಪವಾದ ವಜ್ರ ಶಾಂತಸಿಂಹನಿಗೆ ಬಂದ ರೀತಿ, ಮತ್ತು ಆತನು ಹೊರಟ ದಿಕ್ಕನ್ನೂ ತಿಳಿಸಿದ.

ಆಗ ಕ್ರೂರಸಿಂಹ "ನೀನು ನನಗೆ ರಹಸ್ಯ ತಿಳಿಸಿದ್ದಕ್ಕೆ ವಾಗ್ದಾನದ ಪ್ರಕಾರ ಸಾವಿರ ಮೊಹರಿಗಳನ್ನು ಕೊಡುತ್ತಿದ್ದೇನೆ. ನಿನ್ನ ಯಜಮಾನನಿಗೆ ದ್ರೋಹವೆಸಗಿದ್ದಕ್ಕೂ ಸಹ ನೀನು ಬಹುಮಾನ ಪಡೆಯಬೇಕು. ಇದೋ ಬಹುಮಾನ" ಎಂದು ಕೈಯಲ್ಲಿದ್ದ ಖಡ್ಗದಿಂದ ಅವನ ತಲೆ ಕತ್ತರಿಸಿ ಹಾಕಿದ.



ಆ ದ್ರೋಹಿಯ ಕಳೇಬರವನ್ನು ಕಾಗೆ ಮತ್ತು ಹದ್ದುಗಳಿಗೆ ಬಿಟ್ಟು ಆತನು ಶಾಂತಿ ಸಿಂಹನನ್ನು ಬೆನ್ನಟ್ಟಿದ.

ಸ್ವಲ್ಪ ಹೊತ್ತಾದ ಮೇಲೆ ಶಾಂತಿಸಿಂಹನಿಗೆ ತನ್ನನ್ನು ಯಾರೋ ಹಿಂಬಾಲಿಸುತ್ತಿರುವಂತೆ ತಿಳಿಯಿತು. ತನ್ನ ಅನುಚರರಿಗೆ ಎಚ್ಚರಿಕೆಯಿತ್ತು, ಕುದುರೆಗಳನ್ನು ವಾಯುವೇಗದಿಂದ ಓಡಿಸುವಂತೆ ಹೇಳಿದ.

ಆದರೆ ಲಾಭವಿಲ್ಲದಾಯಿತು. ಶತ್ರುಗಳು ಹಿಂಬಾಲಿಸುತ್ತಲೇ ಇದ್ದರು. ಕ್ರೂರಸಿಂಹ ಸಮೀಪಿಸಿದ. ಅಳಿವು ಉಳಿವು ತಿಳಿದುಕೊಳ್ಳಬೇಕಾದ ಸಮಯ ಬಂತು.

"ನಿಮ್ಮ ದಾರಿ ನೀವು ನೋಡಿಕೊಳ್ಳಿ" ಎಂದು ಅನುಚರರಿಗೆ ಹೇಳಿ ಶಾಂತಿಸಿಂಹ ತನ್ನ ಕುದುರೆಯನ್ನು ಮುಂದಕ್ಕೆ ಓಡಿಸಿದ. ತನ್ನ ಹತ್ತಿರವಿರುವ ವಜ್ರಕ್ಕಾಗಿ ಶತ್ರುಗಳು ಬೆನ್ನಟ್ಟಿರುವರೆಂದು ಆತನಿಗೆ ಗೊತ್ತಿದೆ.

ಈಗ ಆತನು ಒಬ್ಬೊಂಟಿಗ. ಆತನು ಹತ್ತಿದ್ದ ಅರಬ್ಬಿಕುದುರೆ ನಾಗಾಲೋಟದಿಂದ ಓಡುತ್ತಿದೆ. ಅದರವೇಗ ಆತನಿಗೂ ಶತ್ರುಗಳಿಗೂ ಇರುವ ಅಂತರವನ್ನು ಹೆಚ್ಚಿಸಿತು. ಅದು ಆತನ ಪ್ರಾಣವನ್ನು ಕಾಪಾಡುತ್ತಿದೆ. ಆದರೇನು, ಇನ್ನೂ ಶತ್ರುಗಳು ಹಿಂಬಾಲಿಸುತ್ತಲೇ ಇರುವರು. ಆತನನ್ನು ಬಿಡಲಿಲ್ಲ.

ಸೂರ್ಯನು ಅಸ್ತಮಿಸಿದ. ಶಾಂತಸಿಂಹ ಹತ್ತಿರುವ ಅರಬ್ಬೀ ಕುದುರೆಗೂ, ಕ್ರೂರಸಿಂಹ

 






ಹತ್ತಿಬರುವ ಕರಿಯ ಅಶ್ವಕ್ಕೂ ತೀವ್ರವಾದ ಸ್ಪರ್ಧೆ ಪ್ರಾರಂಭವಾಯಿತು. ಶಾಂತಸಿಂಹ ಹಿಂದಕ್ಕೆ ತಿರುಗಿ ನೋಡಿದ.

ಶತ್ರುಗಳಲ್ಲಿ ಕ್ರೂರಸಿಂಹನೊಬ್ಬನೇ ತನ್ನ ಹತ್ತಿರಕ್ಕೆ ಬರುತ್ತಿರುವಂತೆ ಕಾಣಿಸಿತು. ಕುದುರೆಯನ್ನು ಒಂದೆಡೆ ನಿಲ್ಲಿಸಿದ. ಶತ್ರುವಿನ ಮೇಲೆ ಗುರಿನೋಡಿ ಒಂದು ಬಾಣ ಬಿಟ್ಟ.

ಆದರೆ ಕ್ರೂರಸಿಂಹ ತಟಕ್ಕನೆ ತಲೆ ತಗ್ಗಿಸಿದ. ಬಾಣದ ಗುರಿತಪ್ಪಿ, ಕುದುರೆಗೆ ಬಿತ್ತು. ಅದು ಕೆಳಗೆ ಬಿದ್ದು ಪ್ರಾಣಬಿಟ್ಟಿತು. ಸವಾರನೂ ಸಹ ಸತ್ತವನಂತೆ ನಟಿಸುತ್ತಾ ಕೆಳಗೆ ಬಿದ್ದ!

ಶಾಂತಿಸಿಂಹ ಹತ್ತಿರಕ್ಕೆ ಹೋಗಲು ತಟಕ್ಕನೆ ಎದ್ದು ಆತನನ್ನು ಹಿಡಿದುಕೊಂಡ ಕ್ರೂರಸಿಂಹ.

ಕಥೆ ಅಡ್ಡ ತಿರುಗಿತು. ಬೆಕ್ಕಿನ ಬಾಯಿಗೆ ಸಿಕ್ಕಿಕೊಂಡ ಇಲಿಯಂತೆ ಆಯಿತು ಶಾಂತಿಸಿಂಹನ ಸ್ಥಿತಿ. ವಿಲವಿಲನೆ ಒದ್ದಾಡಿದ. ಆದರೂ ಧೈರ್ಯ ಬಿಡಲಿಲ್ಲ. ಬಾಕು ತೆಗೆದುಕೊಂಡು ಹೋರಾಡಿದ.

ಕ್ರೂರಸಿಂಹ ಖಡ್ಗವನ್ನು ತೆಗೆದ. ಈ ಹೋರಾಟದಲ್ಲಿ ಆತನ ಎದೆಯ ಮೇಲೆ ದೊಡ್ಡ ಗಾಯವಾಯಿತು. ಆದರಿಂದ ರಕ್ತ ಧಾರಾಕಾರವಾಗಿ ಸುರಿಯುತಿತ್ತು.

ಎರಡನೇ ಏಟುಕೊಡಲು ಕ್ರೂರಸಿಂಹನು ಪ್ರಯತ್ನ ಮಾಡುವಷ್ಟರಲ್ಲಿ, ಶಾಂತಸಿಂಹ ತನ್ನ ಖಡ್ಗವನ್ನು ಬಲವಾಗಿ ಬೀಸಿದ. ಆ ಹೊಡೆತಕ್ಕೆ ಕ್ರೂರಸಿಂಹನ ರುಂಡಮುಂಡಗಳು ಬೇರೆ ಬೇರೆಯಾದುವು. ಅಂತೂ ಕ್ರೂರಸಿಂಹ ಮರಣಿಸಿದ.

ತುಂಬಾ ಆಯಾಸವಾಯಿತು ಶಾಂತಸಿಂಹನಿಗೆ. ಆದರೂ ವಿಶ್ರಾಂತಿ ಪಡೆಯದೆ ಮುಂದೆ ನಡೆದ. ಕ್ರೂರಸಿಂಹನ ಅನುಚರರಿಂದ ಪ್ರಮಾದವೇನಾದರೂ ಆಗಬಹುದೆಂಬ ಹೆದರಿಕೆಯಿತ್ತು.

ಬೆಳಗಾಗುವ ವೇಳೆಗೆ ಕಾಶ್ಮೀರದ ಗಡಿಯನ್ನು ಸೇರಿದ. ಇಕ್ಕಡೆಗಳಲ್ಲಿದ್ದ ಫಲವೃಕ್ಷಗಳನ್ನೂ, ವೃಕ್ಷಗಳ ಮೇಲೆ ಗಾನಮಾಡುತ್ತಿದ್ದ ವಿವಿಧ ಪಕ್ಷಿಗಳನ್ನೂ, ಅಲ್ಲೇ ಪ್ರವಹಿಸುತ್ತಿರುವ ತಿಳಿನೀರಿನ ಕೊಳಗಳನ್ನೂ ಕಂಡು ಆತನ





ಮನಸ್ಸಿಗೆ ಒಂದು ವಿಧವಾದ ಶಾಂತಿಯುಂಟಾಯಿತು. ಬಳಲಿಕೆ ತೀರಿತು.

ಆ ಸ್ಥಳವನ್ನು ದಾಟಿ ಆತನು ಒಂದಾನೊಂದು ಉದ್ಯಾನವನವನ್ನು ಹೊಕ್ಕು ಅಲ್ಲಿದ್ದ ಒಂದು ಶಿಲಾಸನದ ಮೇಲೆ ಮಲಗಿದ. ಸೊಗಸಾದ ತಂಗಾಳಿಗೆ ಗಾಢನಿದ್ರೆ ಆತನನ್ನು ಆವರಿಸಿತು.

ಆ ಪ್ರದೇಶದ ಅಧಿಪತಿ ಧ್ಯಾನಸಿಂಹನ ಏಕಮಾತ್ರ ಪುತ್ರಿಯಾದ ಸುಮಿತ್ರಾ ವಿಹರಿಸುವ ಉದ್ಯಾನವದು. ಆಕೆ ತನ್ನ ಸಖಿಯರೊಂದಿಗೆ ವಿಹಾರಾರ್ಥವಾಗಿ ಅಲ್ಲಿಗೆ ಬಂದಳು. ಆ ಏಕಾಂತ ಪ್ರದೇಶದಲ್ಲಿ ಆಕೆ ಬಹು ಸ್ವೇಚ್ಛೆಯಾಗಿ ಸುಳಿದಾಡುತ್ತಿದ್ದಳು.

ಅಷ್ಟರಲ್ಲಿ ನಿದ್ದೆಮಾಡುತ್ತಿದ್ದ ಶಾಂತಸಿಂಹ ಕಾಣಿಸಿದ ಆಕೆಗೆ. ಸರ್ರನೆ ಮರಳಿಹೋಗುವವಳಿದ್ದಳು ಸುಮಿತ್ರ. ಆದರೆ ಆ ಯುವಕನ ಸುಂದರರೂಪವನ್ನು ನೋಡಿ ಹಾಗೇ ಹೋಗಲು ಆಕೆಗೆ ಮನಸ್ಸುಬರಲಿಲ್ಲ.

ಈ ಸಮಯದಲ್ಲಿ ಶಾಂತಸಿಂಹನಿಗೆ ಎಚ್ಚರಿಕೆ ಆಯಿತು. ರಾಜಕುಮಾರಿಯನ್ನು ನೋಡಿದ. ತಟಾಲನೆ ಎದ್ದು ನಮಸ್ಕಾರ ಮಾಡಿದ. ರಾಜಕುಮಾರಿ ನಾಚಿಕೆಯಿಂದ ಅಲ್ಲಿಂದ ಹೊರಟುಹೋದಳು.

ಮರಳಿ ಹೋಗುವಾಗ ಆಕೆ ಶಾಂತಸಿಂಹನ ಹೃದಯವನ್ನು ಕಸಿದುಕೊಂಡು ಹೋದಳು. ಆದರೆ ರಾಜಕುಮಾರಿಯ ಕೈ ಹಿಡಿಯುವುದು ತನಗೆ ಅಸಾಧ್ಯವೆಂದು ತೋರಿತು ಶಾಂತಸಿಂಹನಿಗೆ. ತಟಕ್ಕನೆ ತನ್ನ ಹತ್ತಿರವಿದ್ದ ವಜ್ರದ ವಿಷಯ ಜ್ಞಾಪಕಕ್ಕೆ ಬಂತು. ಕೂಡಲೇ ಆ ವಜ್ರ ತೆಗೆದುಕೊಂಡು ಆ ರಾಜಕುಮಾರಿಯ ತಂದೆಯ ಹತ್ತಿರಕ್ಕೆ ಹೋಗಿ ತನ್ನ ವಿಷಯವನ್ನು ತಿಳಿಸಿದ. ಆ ವಜ್ರ ಲೋಕಪ್ರಸಿದ್ಧವಾದುದರಿಂದ ಆಕೆಯ ತಂದೆ ಆತನನ್ನು ಕೂಡಲೇ ಗುರುತುಹಿಡಿದ.

ಸುಮಿತ್ರೆಗೂ ಶಾಂತಸಿಂಹನಿಗೂ ವೈಭವದಿಂದ ವಿವಾಹ ನಡೆಯಿತು. ಅಂದು ತನ್ನ ಅಣ್ಣನ ಸಂಸಾರವನ್ನು ನಿರ್ಮೂಲವಮಾಡಿದ ವಜ್ರ ಇಂದು ಶಾಂತಿಸಿಂಹನನ್ನು ಒಬ್ಬ ಕಟುಂಬದವನನ್ನಾಗಿ ಮಾಡಿದ ಅಮೂಲ್ಯವಾದ ಆಭರಣವಾಯಿತು.



# 'ಒಂಬತ್ತರ' ಮಹತ್ವ

ಅಂಕಿಗಳಲ್ಲಿ ತುಂಬಾ ವಿಚಿತ್ರವಾದ ಅಂಕೆ 9. ಈ ಅಂಕಿಯಿಂದ ಅನೇಕ ತಮಾಷೆಗಳನ್ನು ಮಾಡಬಹುದು. ಮೊದಲು ಉದಾಹರಣೆಗಾಗಿ ಒಂಬತ್ತನೇಯ ಮಗ್ಗಿ ತೆಗೆದುಕೊಳ್ಳೋಣ.

ಒಂಬತ್ತು ಒಂದ್ಲ ಒಂಬತ್ತು

$9 \times 2 = 18$

$9 \times 3 = 27$

$9 \times 4 = 36$

$9 \times 5 = 45$

ಒಂಬತ್ತು ಆರುಗಳೆಷ್ಟು? ಎಂಬ ಪ್ರಶ್ನೆಗೆ ನಾವು ತಡಿಸದೆ ಉತ್ತರ ಹೇಳಬಹುದು. $9 \times 5 = 45$ ಅಲ್ಲವೇ? ಆ 45 ನ್ನು ತಿರುಗಿಸಿ ಹೇಳಿದರೆ ಸರಿ. ಅದೇರೀತಿ ಸಾಲಾಗಿ ಮಿಕ್ಕವು ಸಹ. ನೋಡಿ ಇಲ್ಲಿ :

$9 \times 6 = 54$

$9 \times 7 = 63$

$9 \times 8 = 72$

$9 \times 9 = 81$

ಇನ್ನೊಂದು ವಿಶೆಷವಿದೆ: 9 ನೇ ಮಗ್ಗಿಯನ್ನು ಗುಣಿಸಿದರೆ ಬರುವ ಮೊತ್ತ ಯಾವುದಾದರೂ ಸರಿಕೂಡಿದರೆ ಮತ್ತೆ 9 ನೇಯ ಅಂಕಿಯೇ ಬರುತ್ತದೆ. ಉದಾಹರಣೆಗಾಗಿ :

$9 \times 2 = 18 \quad .... \quad 1 + 8 = 9$

$9 \times 3 = 27 \quad .... \quad 2 + 7 = 9$

$9 \times 4 = 36 \quad .... \quad 3 + 6 = 9$

$9 \times 5 = 45 \quad .... \quad 4 + 5 = 9$

ಇದೇರೀತಿ ಉಳಿದವೂ.

ಕೂಡುವುದರಲ್ಲಿ 9 ನ್ನು ಕುರಿತು ಮತ್ತೊಂದು ವಿಶೇಷವಿದೆ. 9 ನೇ ಅಂಕಿಗೆ ಮತ್ತೊಂದು ಸಂಖ್ಯೆ ಸೇರಿಸು. ಹಾಗೆಬಂದ ಮೊತ್ತವನ್ನು ಮತ್ತೆ ಸೇರಿಸು. ಮೊದಲು ನೀನು ಯಾವ ಅಂಕಿಯನ್ನು ಸೇರಿಸಿದೆಯೋ ಅದೇ ಈಗಲೂ ಬರತ್ತದೆ. 9 ನೇ ಸಂಖ್ಯೆ ಕದಲದೆ ಅದರ ಸ್ಥಾನದಲ್ಲೇ ಇರುತ್ತದೆ. ಉದಾಹರಣೆಗಾಗಿ :

$9 + 2 = 11 \quad .... \quad 1 + 1 = 2$

$9 + 3 = 12 \quad .... \quad 1 + 2 = 3$

$9 + 4 = 13 \quad .... \quad 1 + 3 = 4$

$9 + 5 = 14 \quad .... \quad 1 + 4 = 5$

$9 + 6 = 15 \quad .... \quad 1 + 5 = 6$

$9 + 7 = 16 \quad .... \quad 1 + 6 = 7$

$9 + 8 = 17 \quad .... \quad 1 + 7 = 8$

$9 + 9 = 18 \quad .... \quad 1 + 8 = 9$

ನಿಮಗೆ ತಿಳಿದ ಇದೇರೀತಿಯ ವಿಚಿತ್ರಗಳು ಯಾವುದಾದರೂ ಇದ್ದರೆ ನಮಗೆ ಕಳುಹಿಸಿ.

# ★ ಹೂ ★

ಓಡಿಬನ್ನಿ ಕೂಡಿಬನ್ನಿ
ನೋಡಿ ಬನ್ನಿರೋ !
ಒಳ್ಳೆ ಒಳ್ಳೆ ಹೂಗಳುಂಟು
ಕೊಳ್ಳಾ ಬನ್ನಿರೋ !

ಸುಳ್ಳೀ ಸೇವಂತಿ ಇರುವಂತಿ
ಪನ್ನೀರ್ ಮಂದಾರ,
ಮಲ್ಲಿಗೆ, ದುಂಡಮಲ್ಲಿಗೆ, ಜಾಜಿ
ಸೊಬಗಿನ ಸಿಂಗಾರ
ಕೆಂಡ ಸಂಪಿಗೆ, ಕನಕಾಂಬರಿ, ನೀ
ಲಾಂಬರಿ, ಪಾರಿಜಾತ
ಕಂಪಿನ ಕೇದಗೆ, ಗುಲಾಬಿಗೊಂಚಲು
ರಂಜೆ ಪಚ್ಚೆಗೊನೇ ಸೈತಾ !

ಕನ್ನಡಮಕ್ಕಳು ಪನ್ನೀರೆರೆದು
ತಣ್ಣಗೆ ಬೆಳೆಸಿದ ಹೂ !
ಕನ್ನಡ ನಾಡಿನ ತೋಟದಲಿ
ಅರಳಿದ ಚೆಲುವಿನ ಹೂ !
ಕನ್ನಡ ತಂಗಿಯರಾಯ್ದಾ ಹೂ !
ಕನ್ನಡ ತಾಯಿಗೆ ಮಾಲೇ ಹೂ !
ಕನ್ನಡ ಕಂದರ ನಲಿಸುವ ನಗಿಸುವ
ಗಮಗಮ ಪರಿಮಳ ಬಗೆಬಗೆ ಹೂ !

"ಸುಂದರಿ"

# ಹಿಂಬದಿಯ ಚಿತ್ರ

ಇದಿರಿನಲ್ಲಿ ಪ್ರತ್ಯಕ್ಷಳಾದ ಆ ಸುಂದರಿ ತನ್ನ ಶಾಪವೃತ್ತಾಂತವನ್ನು ಕುರಿತು ಹೀಗೆಂದಳು :— " ಕುಮಾರ ಸದಯಸೇನ, ನನ್ನ ಹೆಸರು ರತ್ನಮಾಲೆ. ನನ್ನ ತಾಯಿ ಅತ್ಯಂತ ರೂಪವತಿ. ಅವಳಿಗೆ ಹೂದೋಟಗಳಲ್ಲಿ ವಿಹರಿಸುವುದೆಂದರೆ ಅತಿ ಕತೂಹಲ.

ಒಮ್ಮೆ ಅವಳು ಒಂದು ಅತಿ ಸುಂದರವಾದ ಉದ್ಯಾನವನ್ನು ಹೊಕ್ಕಳು. ಅಲ್ಲಿಯ ಚಿತ್ರವಿಚಿತ್ರವಾದ ಫಲವೃಕ್ಷಗಳು ಅವಳನ್ನು ಆಕರ್ಷಿಸಿದುವು. ಹಣ್ಣುಗಳನ್ನು ಕೊಯ್ಯಲಿಕ್ಕೆ ಹೋದಳು. ಆಗ ಒಬ್ಬಳು ಮುದಿ ರಕ್ಕಸಿ ಬಂದು—' ಅಮ್ಮ, ನೀನು ಈ ಬೇಡದ ಹಣ್ಣುಗಳಿಗಾಗಿ ಆಶಿಸುವುದು ತಪ್ಪಲ್ಲವೆ? ಹೋಗಲಿ, ನಿನಗೆತಿಳಿಯದು. ನನಗೊಂದು ಸಣ್ಣ ಮಾತುಕೊಟ್ಟರೆ, ನೀನು ಬೇಕಷ್ಟು ಹಣ್ಣುಗಳನ್ನು ತಿನ್ನ ಬಹುದು ' ಎಂದಳು.

ಅದಕ್ಕೆ ನನ್ನ ತಾಯಿ ಒಪ್ಪಿದಳು. ಆ ಮುದುಕಿ ' ನಿನಗೆ ಹುಟ್ಟಿದ ಮೊದಲನೇ ಮಗುವನ್ನು ನನಗೆಕೊಡಬೇಕು ' ಎಂದುಕೋರಿದಳು. ಆ ಮಾತು ಕೊಟ್ಟಳು ನನ್ನ ತಾಯಿ. ಬಳಿಕ ಇಷ್ಟ ಬಂದಂತೆ ಹಣ್ಣು ತಿಂದಳು. ಸ್ವಲ್ಪಕಾಲದಮೇಲೆ ನಾನು ಹುಟ್ಟಿದೆ. ನನ್ನ ತಂದೆತಾಯಿಗಳು ನನ್ನನ್ನು ಅಡಗಿಸಿಟ್ಟು ಕಾಪಾಡುತ್ತ ಬಂದರು. ಆದರೆ ಈ ಸಂಗತಿಹೇಗೋ ಆ ರಕ್ಕಸಿಯ ಕಿವಿಗೆ ಬಿತ್ತು. ಅವಳು ಕೋಪದಿಂದ ಒಂದು ಭೂತಸರ್ಪವನ್ನು ರಾಜ್ಯದೊಳಗೆ ಅಟ್ಟಿದಳು. ಆ ಸರ್ಪವು ಸಿಕ್ಕಿದವರನ್ನೆಲ್ಲ ನುಂಗತೊಡಗಿತು. ಕಡೆಗೆ ನನ್ನ ಹೆತ್ತವರು ನನ್ನನ್ನು ರಕ್ಕಸಿಗೆ ಒಪ್ಪಿಸಿದ ನಂತರವೇ ಆ ಸರ್ಪಬಾಧೆ ತೊಲಗಿತು.

ನಾನೂ ನನ್ನ ಪರಿವಾರವೂ ಆ ರಕ್ಕಸಿಯ ಮನೆಯಲ್ಲಿದ್ದೆವು. ಒಂದುದಿನ ಕಿಟಕಿಯಿಂದ ನಾನೊಬ್ಬ ಸುಂದರ ರಾಜಕುಮಾರನನ್ನು ನೋಡಿದೆ. ಅವನಮೇಲೆ ನನ್ನ ಮನಸ್ಸು ಹೋಯಿತು. ನಾನು ಕಿಟಕಿಯ ತೆರೆ ಹರಿದು ತಪ್ಪಿಸಿಕೊಳ್ಳಬೇಕೆಂದು ನೋಡಿದೆ. ಕೂಡಲೇ ಆ ರಕ್ಕಸಿ ನನ್ನನ್ನೂ ನನ್ನ ಪರಿವಾರವನ್ನೂ ಬೆಕ್ಕುಗಳನ್ನಾಗಿ ಮಾಡಿಬಿಟ್ಟಳು. ನಮಗೆ ರಾಜೋಪಚಾರಗಳನ್ನು ಮಾಡಲಿಕ್ಕೆ ಅನೇಕ ಹಸ್ತಗಳನ್ನು ಏರ್ಪಡಿಸಿದಳು. ನಾನು ತುಂಬಾ ಬೇಡಿಕೊಂಡಾಗ, ' ಆ ರಾಜಕುಮಾರನೆ ಬಂದು ನಿನ್ನ ತಲೆಕಡಿದು, ಉಗುರುಗಳನ್ನು ಸುಟ್ಟುಹಾಕಿದಾಗ, ನಿನಗೆ ಶಾಪ ವಿಮುಕ್ತಿಯಾಗುತ್ತದೆ ' ಎಂದಳು. ಅಂದಿನಿಂದ ನಾನು ಆ ರಾಜಕುಮಾರನ ಚಿತ್ರವನ್ನು ಬರೆದಿಟ್ಟುಕೊಂಡು ಅಲಂಕರಿಸಿ ಆರಾಧಿಸುತ್ತಾ ಬರುತ್ತಿದ್ದೇನೆ. ಆ ರಾಜಕುಮಾರ ನೀನೇ, ನಿನಗಾಗಿ ಕಾದಿರುವ ರತ್ನಮಾಲೆ ನಾನೇ!" ಎಂದು ಹೇಳಿ ಮುಗಿಸಿದಳು.

## ಏಪ್ರಿಲ್ ತಿಂಗಳ 'ಹೇಳಬಲ್ಲಿರಾ?' ಉತ್ತರಗಳು

1. ಗಡಿಯಾರ 12 ಹೊಡೆಯಲು 66 ಸೆಕೆಂಡುಗಳು ಹಿಡಿಯುತ್ತವೆ. ಮೊದಲನೇ ಹೊಡೆತಕ್ಕೂ 6-ನೇ ಹೊಡತಕ್ಕೂ ಮಧ್ಯೆ 6-6 ಸೆಕೆಂಡುಗಳ ಐದು ವ್ಯವಧಿಗಳಿರುತ್ತವೆ. ಮೊದಲನೇ ಹೊಡೆತಕ್ಕೂ 12 ನೇ ಹೊಡೆತಕ್ಕೂ ಮಧ್ಯೆ 6-6 ಸೆಕೆಂಡುಗಳ 11 ವ್ಯವಧಿಗಳಿರುತ್ತವೆ. ಆದ್ದರಿಂದ ಗಡಿಯಾರ ಹನ್ನೆರಡು ಹೊಡೆಯಲು 66 ಸೆಕೆಂಡುಗಳು ಹಿಡಿಯುತ್ತದೆ.

2. ಮನೆಯಾಕೆಯ ಮಗ 3 ಪಾವಿನ ಪಾತ್ರೆ ತುಂಬಾ ಎರಡುಸಾರಿ ಹಾಲುತುಂಬಿ, ಆ ಹಾಲನ್ನು 5 ಪಾವಿನಪಾತ್ರೆಯಲ್ಲಿ ಹಾಕಲು, ಐದುಪಾವಿನ ಪಾತ್ರೆತುಂಬಿ ಹೋಗಿ, ಮೂರುಪಾವಿನ ಪಾತ್ರೆಯಲ್ಲಿ ಒಂದು ಪಾವುಹಾಲು ಉಳಿಯುವುದು. ಈಗ ಆತನು ಐದುಪಾವಿನ ಪಾತ್ರೆಯಲ್ಲಿದ್ದ ಹಾಲನ್ನು ಹಾಲಿನವನ ಪಾತ್ರೆಯಲ್ಲಿ ಸುರಿದು ಮೂರುಪಾವಿನ ಪಾತ್ರೆಯಲ್ಲಿ ಉಳಿದಿದ್ದ ಒಂದು ಪಾವುಹಾಲನ್ನು ಐದುಪಾವಿನ ಪಾತ್ರೆಯಲ್ಲಿ ಸುರಿದ. ಇನ್ನು ಮೂರು ಪಾವಿನ ಪಾತ್ರೆಯನ್ನೂ ಹಾಲಿನವನ ಪಾತ್ರೆಯಿಂದ ಮತ್ತೆ ತುಂಬಿ ಒಂದು ಪಾವುಹಾಲು ಹಾಕಿದ್ದ ಐದು ಪಾವಿನಪಾತ್ರೆಯಲ್ಲಿ ಹಾಕಲು ಸರಿಯಾಗಿ ನಾಲ್ಕು ನಾಲ್ಕು ಪಾಲಿನ ಎರಡು ಸಮಭಾಗಗಳಾಯಿತು.

3. ಹನ್ನೆರಡು ಜನರಲ್ಲಿ ಕೊನೆಯ ಬಾಲಕ ಹಣ್ಣಿನೊಂದಿಗೆ ಬುಟ್ಟಿಯನ್ನೂ ಸಹ ತೆಗೆದುಕೊಳ್ಳುವನು.

4. ಬಣಬೆಯ ಸುತ್ತಲೂ ತಿರುಗಲು ಕಳ್ಳರಿಗೆ 40 ಸೆಕಂಡುಗಳು ಬೇಕಾಗುತ್ತಿದೆ; ಯಜಮಾನಿಗೆ 30 ಸೆಕೆಂಡುಗಳುಬೇಕು. ಆದುದರಿಂದ ಕಳ್ಳ ಮೂರುಸಾರಿ ಸುತ್ತಿಬರುವ ಸಮಯದಲ್ಲಿ ಯಜಮಾನ ನಾಲ್ಕುಸಾರಿ ಸುತ್ತುವನು. ಕಳ್ಳ 1/2 ಸುತ್ತು ಮುಂದೆ ಇರುವಾಗ ಇಬ್ಬರೂ ಓಡಲು ಪ್ರಾರಂಭಿಸಿದಪ್ರಯುಕ್ತ ಎರಡುಸುತ್ತು ಸುತ್ತುವಷ್ಟರಲ್ಲಿ ಯಜಮಾನಿ ಕಳ್ಳನನ್ನು ಹಿಡಿಯಬಲ್ಲನು.

---

'ಉತ್ತರಹೇಳು' ಪ್ರಶ್ನೆಗಳಿಗೆ ಉತ್ತರ:

1. ರಷ್ಯ. 2. ಹೇಸ್ಟಿಂಗ್ಸ್. 3. ಉಷ್ಟ್ರಪಕ್ಷಿ. 4. ಸಹರಾ. 5. ವಾಟ್. 6. ಮುದ್ರಣ.

## ಫೋಟೋ ಶೀರ್ಷಿಕೆಯ ಸ್ಪರ್ಧೆ

ಜೂನ್ ಫೋಟೋಗಳ ಫಲಿತಾಂಶ:

ಜೂನ್ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ:

ಮೊದಲನೇ ಫೋಟೋ:

ಏಣಿಗೆ ನಾವು

ಎರಡನೇ ಫೋಟೋ:

ಬಾನಿಗೆ ನಾವು

ಕ ಳಿ ಸಿ ದ ವ ರು:

ಮಿಸ್. ಪದ್ಮಾವತಿಕಾರಂತ್

ಕಲ್ಲಮುಂಡ್ಕೂರು, ದ. ಕನ್ನಡ

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಜೂನ್ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಜೂನ್ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

## ಜೂಲೈ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

## ಮುಖ್ಯ ಸೂಚನೆ:

ನೀವು ಕಳುಹಿಸುವ ಶೀರ್ಷಿಕೆಗಳನ್ನು ಆಚೆಯ ಪುಟದ ಕೂಪನಿನಲ್ಲೇ ಬರೆದು ಕಳಿಸಬೇಕು. ಅದನ್ನು ಕತ್ತರಿಸಿ ಕವರಿನಲ್ಲಿ ಹಾಕಿ ಮುಚ್ಚದೆ, 0-0-9 ಸ್ಟಾಂಪು ಹಚ್ಚಿ ಬುಕ್‌ಪೋಸ್ಟ್ ಮೂಲಕ ಕಳಿಸಿ. ಪತ್ರವೇನೂ ಇಡಬೇಡಿ.

1953 ಜೂಲೈ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





★ ಮೇಲಿನ ಎರಡು ಫೋಟೋಗಳಿಗೆ ಸರಿಹೋಗುವ ಶೀರ್ಷಿಕೆಗಳು ಬೇಕು. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು. ಎರಡು ಫೋಟೋಗಳಿಗೂ ಸಂಬಂಧಿಸಿದ ಮಾತಾಗಿರಬೇಕು.

★ ಮೇ 10ನೇ ತಾರೀಕಿನೊಳಗೆ ಶೀರ್ಷಿಕೆಗಳು ನಮಗೆ ಸೇರಬೇಕು. ಆಮೇಲೆ ಬಂದವುಗಳನ್ನು ಖಂಡಿತ ಪರಿಶೀಲಿಸಲಾಗದು.

★ ನಮಗೆ ಬಂದ ವಾಕ್ಯಗಳಲ್ಲಿ ಅತ್ಯುತ್ತಮವಾದ ಒಂದು ಜತೆ (ಅಂದರೆ ಎರಡು ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುತ್ತದೆ.

★ ಕೆಳಗಿನ ಕೂಪನ್‌ನಲ್ಲಿ ಎರಡು ಶೀರ್ಷಿಕೆಗಳನ್ನು ಬರೆದು ತುಂಬಿಸಿ, ಈ ವಿಳಾಸಕ್ಕೆ ಕಳಿಸಬೇಕು: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

★ ಚಂದಮಾಮ ಕೂಪನ್ ಹೊರತು ಬೇರೆ ವಿಧವಾಗಿ ಕಳಿಸುವ ಶೀರ್ಷಿಕೆಗಳು ಖಂಡಿತ ಸ್ವೀಕರಿಸಲ್ಪಡುವುದಿಲ್ಲ.

→ ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಕೂಪನ್ ←

ಮೊದಲನೇ ಫೋಟೋ — ಎರಡನೇ ಫೋಟೋ

ಶೀರ್ಷಿಕೆ.............................. ಶೀರ್ಷಿಕೆ..............................

ಕಳಿಸಿದವರ ಹೆಸರು..............................

ಪೂರ್ಣ ವಿಳಾಸ..............................

July '53

ಬರುತ್ತದೆ!

ವಿಜಯ ರವರ

# ಚಂದ್ರಹಾರಂ

ನಿರ್ದೇಶಕರು
ಕೆ. ಕಾಮೇಶ್ವರರಾವ್ B.A.



ನಿರ್ಮಾಪಕರು...ನಾಗಿರೆಡ್ಡಿ...ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26, and Published by him from Chandamama Publications, Madras 26, Controlling Editor: SRI CHAKRAPANI.

Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಆಲಾಪಿಸಲು

ಕಳಿಸಿದವರು:
ಜಿ. ಪದ್ಮಾ, ಮದ್ರಾಸು

